# ಶ್ರೀ ಅಧ್ಯಾತ್ಮಮಾಲಿಕಾ

(ಕನ್ನಡಾನುವಾದ, ವಿವರಣೆ ಸಹಿತ)

ಸಂಪಾದಕರು

ಶ್ರೀನಿವಾಸ ಸು. ಮಠದ

ಗೀತಾ ಪ್ರಕಾಶನ, ವಿಜಾಪುರ

॥ ಶ್ರೀಃ ॥

# ಶ್ರೀ ಅಧ್ಯಾತ್ಮಮಾಲಿಕಾ

## (ಕನ್ನಡಾನುವಾದ, ವಿವರಣೆ ಸಹಿತ)

ಸಂಪಾದಕರು

ಶ್ರೀನಿವಾಸ ಸು. ಮಠದ

ಗೀತಾ ಪ್ರಕಾಶನ

ಅಜರೇಕರ ಚಾಳ, ವಿಜಾಪುರ - 586 101

ದೂರವಾಣಿ : 258362

SRI ADHYATMA MALIKA, Kannada rendering
by Srinivas S. Mathad, B.Sc; M.A.
Ajarekar Chal, Meenaxi Chowk, BIJAPUR -586101
Phone : 258362

First Edition 2005



Pages : 32

Price :

Copies : 1000

Publisher :

Geeta Prakashana
Ajarekar Chal, Meenaxi Chowk
BIJAPUR – 586 101

*Printers :*

Ravindra Akalwadi
Manohar Printing Press
Dharwad - 1
Phone : 2790030, 2741984

# ಲೇಖಕರ ನುಡಿ

ಭಗವಂತನ ಪ್ರೇರಣೆಯಿಂದ 'ಅಧ್ಯಾತ್ಮಮಾಲಿಕಾ' ಇದರ ಕನ್ನಡಾನುವಾದವನ್ನು ಈ ಚಿಕ್ಕ ಗ್ರಂಥದಲ್ಲಿ ನೀಡಿದ್ದೇನೆ. 'ಅಧ್ಯಾತ್ಮಮಾಲಿಕಾ' ಇದು ಶ್ರೀ ಶ್ರೀಪಾದರಾಜರ ಕೃತಿ ಎಂಬ ನಂಬಿಕೆ ಇತ್ತು. ಆದರೆ ಶ್ರೀ ಪಂ|| ಪ್ರದೀಪಸಿಂಹಾಚಾರ್ಯರು ನಾಲ್ಕು ಹಸ್ತಪ್ರತಿಗಳನ್ನು ಪರಿಶೀಲಿಸಿ, ಅದು ಶ್ರೀ ಶ್ರೀ ಪಾದರಾಜರದಲ್ಲ ಶ್ರೀ ರಾಮಾಚಾರ್ಯರ ಕೃತಿಯೆಂದು ದೃಢಪಡಿಸಿದ್ದಾರೆ.

ಈ ಕೃತಿಯನ್ನು ನಮ್ಮ ಕುಲಸ್ವಾಮಿಯಾದ ಶ್ರೀ ಶ್ರೀನಿವಾಸದೇವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಿಸಿದ್ದೇನೆ.

ಕೃತಿರಚನೆಯಲ್ಲಿ ಮಾರ್ಗದರ್ಶನ ಮಾಡಿದ ನನ್ನ ವಿದ್ಯಾಗುರುಗಳಾದ ಶ್ರೀ ಪಂ|| ತ್ರಿವಿಕ್ರಮಾಚಾರ್ಯ ಉಮರ್ಜಿ ಅವರಿಗೆ ನನ್ನ ಕೃತಜ್ಞತಾ ಪೂರ್ವಕ ಶಿ|| ಸಾ|| ನಮಸ್ಕಾರಗಳು.

ಕೃತಿಯ ಕುರಿತು ಅನೇಕ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸಿದ ಶ್ರೀ ಪಂ|| ಕೆ. ಜಿ. ಕಲಕೋಟಿ ಅವರಿಗೆ ನನ್ನ ಕೃತಜ್ಞತಾಪೂರ್ವಕ ಶಿ|| ಸಾ|| ನಮಸ್ಕಾರಗಳು.

ಈ ಕೃತಿಯನ್ನು ಅವಲೋಕಿಸಿ ಉಪಕರಿಸಿದ ಪಂ|| ಶ್ರೀ ಮೊಖಾಸಿ ಮಧ್ವಾಚಾರ್ಯ, ಶ್ರೀ ಪಂ|| ರಂಗನಾಥಾಚಾರ್ಯ ಕಟ್ಟಿ, ಶ್ರೀ ಪಂ|| ವೀರನಾರಾಯಣಾಚಾರ್ಯ ಪಾಂಡುರಂಗಿ, ಶ್ರೀ ಪಂ|| ಶ್ರೀನಿವಾಸಾಚಾರ್ಯ ವರಖೇಡಿ, ಹಾಗೂ ಪ್ರಸ್ತುತ ಕೃತಿಯನ್ನು ಪರಿಶೀಲಿಸಿ ಶುದ್ಧಪಾಠವನ್ನು ಒದಗಿಸಿ, ಅದರ ಅನುವಾದವನ್ನು ತಿದ್ದಿ, ಶ್ರಮವಹಿಸಿ ಡಿ.ಟಿ.ಪಿ.ಯನ್ನು ಮಾಡಿಸಿಕೊಟ್ಟ ಶ್ರೀ ಪಂ|| ಪ್ರದೀಪಸಿಂಹಾಚಾರ್ಯ, ಬೆಂಗಳೂರು ಇವರಿಗೆ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳು.

ಈ ಕೃತಿಯ ಮುದ್ರಣಕ್ಕೆ ಧನಸಹಾಯ ನೀಡಿ ಜ್ಞಾನಕಾರ್ಯ ಮಾಡಿದ ಶ್ರೀ ವಿ. ಕೆ. ಇನಾಮದಾರ, ಕರ್ನಾಟಕ ವಿಕಾಸ ಗ್ರಾಮೀಣ ಬ್ಯಾಂಕ, ಸಿರಗುಪ್ಪಿ ಅವರಿಗೆ ಧನ್ಯವಾದಗಳು. ಶ್ರೀ ಹರಿವಾಯುಗುರುಗಳು ಅವರಿಗೆ ಜ್ಞಾನ ಭಕ್ತಿ ವೈರಾಗ್ಯಾದಿಗಳನ್ನು ಕರುಣಿಸಲಿ.

ಕೃತಿಯ ಪ್ರಕಟಣಾ ಕಾರ್ಯದಲ್ಲಿ ನೆರವಾದ ಶ್ರೀ ರಾಘವೇಂದ್ರ ಅಡಬಡ್ಡಿ, ಚಿ॥ ವಾದಿರಾಜ ಮಠದ ಹಾಗೂ ನನ್ನ ಸುಪುತ್ರ ಚಿ॥ ಆನಂದತೀರ್ಥ ಇವರಿಗೆ ನನ್ನ ಆಶೀರ್ವಾದಗಳು.

ಕೃತಿಯನ್ನು ಸಕಾಲದಲ್ಲಿ ಅಂದವಾಗಿ ಮುದ್ರಣ ಮಾಡಿಕೊಟ್ಟ ಮೆ॥ ಮನೋಹರ ಪ್ರಿಂಟಿಂಗ್ ಪ್ರೆಸ್, ಧಾರವಾಡ ಇವರಿಗೆ ಧನ್ಯವಾದಗಳು.

ಇಂಥ ಕೃತಿಯಿಂದ ಶ್ರೀ ಹರಿವಾಯುಗುರುಗಳು ಸುಪ್ರೀತರಾಗಲಿ.

ವಿಜಾಪುರ
24-11-2005

ಇತಿ ಸಜ್ಜನ ಸೇವಕ
**ಶ್ರೀನಿವಾಸ ಸು. ಮಠದ**

# ಶ್ರೀ ಅಧ್ಯಾತ್ಮಮಾಲಿಕಾ

॥ ಶ್ರೀ ಗುರುಭ್ಯೋನಮಃ ಹರಿಃ ಓಂ ॥

**ತ್ವಕ್ಚರ್ಮಮಾಂಸರುಧಿರಮೇದೋಮಜ್ಜಾಸ್ಥಿನಾಮಕಾಃ ।**
**ಧಾತವಃ ಸಪ್ತಸಂತ್ಯಸ್ಮಿನ್ ಸ್ಥೂಲದೇಹೇ ಕ್ರಮೇಣ ಹಿ ॥ 1 ॥**

ಮಾನವನ ಸ್ಥೂಲದೇಹದಲ್ಲಿ ತ್ವಕ್, ಚರ್ಮ, ಮಾಂಸ, ರಕ್ತ, ಮೇದಸ್ಸು ಮಜ್ಜೆ ಎಲುಬು ಎಂಬ ಏಳು ಧಾತುಗಳು ಕ್ರಮವಾಗಿ ಇರುತ್ತವೆ. ನಿಶ್ಚಿತ.

**ಹಿಂಕಾರನಾಮಾ ಪ್ರದ್ಯುಮ್ನೋ ದೇಹಸ್ಥೋ ರೋಮಣಿ ಸ್ಥಿತಃ ।**
**ಪ್ರಸ್ತಾವಾಖ್ಯೋಽನಿರುದ್ಧಸ್ತು ತ್ವಕ್ಸು ಸಂಕರ್ಷಣೋಽಸ್ತಿ ಹಿ ॥ 2 ॥**

ಮಾನವನ ದೇಹದಲ್ಲಿ (ಶರೀರದಲ್ಲಿ) ಹಿಂಕಾರನಾಮಕ ಪ್ರದ್ಯುಮ್ನರೂಪೀ ಭಗವಂತನು, ಕೂದಲುಗಳಲ್ಲಿ ಪ್ರಸ್ತಾವನಾಮಕ ಅನಿರುದ್ಧ ರೂಪೀ ಭಗವಂತನು, ತ್ವಗಿಂದ್ರಿಯದಲ್ಲಿ ಸಂಕರ್ಷಣರೂಪೀ ಭಗವಂತನು ಇರುತ್ತಾರೆ. ಇದು ಶಾಸ್ತ್ರಸಿದ್ಧ.

**ಚರ್ಮಣಿ ಪ್ರತಿಹಾರಾಖ್ಯಃ ಮಾಂಸೇ ಚೋದ್ಗೀಥನಾಮಕಃ ।**
**ವಾಸುದೇವೋ ವರಶ್ಚೇತಿ ಸ್ಥಿತಂ ರೂಪದ್ವಯಂ ಹರೇಃ ॥ 3 ॥**

ಚರ್ಮದಲ್ಲಿ ಪ್ರತಿಹಾರನಾಮಕ ಭಗವಂತನು, ಮಾಂಸದಲ್ಲಿ ಉದ್ಗೀಥನಾಮಕ ವಾಸುದೇವ, ಹಾಗೂ ವರ ಎಂಬ ಭಗವಂತನ ಎರಡು ಶ್ರೇಷ್ಠರೂಪಗಳು ಇರುತ್ತವೆ.

**ನಿಧನಾಖ್ಯಂ ಶಾಂತಸಂವಿತ್ ಇತಿ ರೂಪದ್ವಯಂ ಹರೇಃ ।**
**ರುಧಿರಸ್ಥಂ ★**

ರಕ್ತದಲ್ಲಿ ನಿಧನ ಹಾಗೂ ಶಾಂತಸಂವಿತ್ ಎಂಬ ಶ್ರೀಹರಿಯ ಎರಡು ರೂಪಗಳು ಇರುತ್ತವೆ.

---

★ ಅನ್ವಯಾನುಸಾರ ಅರ್ಥ ಸುಲಭವಾಗಲು ಶ್ಲೋಕಗಳನ್ನು ವಿಭಜಿಸಲಾಗಿದೆ.

ವಿಶೇಷ: ಮೇಲೆ ತಿಳಿಸಿದ ಶ್ಲೋಕಗಳ ಸಾರವನ್ನು ಶ್ರೀಜಗನ್ನಾಥದಾಸರು ತಮ್ಮ ಶ್ರೀಹರಿಕಥಾಮೃತಸಾರದಲ್ಲಿ ತಿಳಿಸಿರುವುದು ಗಮನಾರ್ಹವಾಗಿದೆ.

ಮೊದಲು ತ್ವಕ್ಚರ್ಮಗಳು ಮಾಂಸವು
ರುಧಿರಮೇದೋಮಜ್ಜವಸ್ಥಿಗ
ಳಿದರೊಳಗೆ ಏಕೋನ ಪಂಚಾಶನ್ಮರುದ್ಗಣವು।
ನಿಧನಹಿಂಕಾರಾದಿ ಸಾಮಗ
ನದರ ನಾಮದಿ ಕರೆಸುತೊಂಭ
ತ್ತಧಿಕ ನಾಲ್ವತ್ತೆನಿಪರೂಪದಿ ಧಾತುಗಳೊಳಿಪ್ಪ॥

(ವರ್ಣಪ್ರಕ್ರಿಯಾಸಂಧಿ 9-27)

**ತತೋ ಮೇದೋಗತಂ ರೂಪದ್ವಯಂ ಹರೇಃ**
**ವಷಟ್ಕಾರಾಭಿದಂ ಚೈಕಂ ಷಾಡ್ಗುಣ್ಯಾಖ್ಯಂ ತಥಾಽಪರಂ ॥ 4 ॥**

**ಆದಿನಾರಾಯಣಶ್ಚೇತಿ ಸಾರಾತ್ಮೇತಿ ದ್ವಿರೂಪಕಃ**
**ಮಜ್ಜಾಸ್ಥೋ ಭಗವಾನ್ ವಿಷ್ಣುಃ ★ ॥ 5 ॥**

ಮೇದಸ್ಸಿನಲ್ಲಿ ವಷಟ್ಕಾರವೆಂಬ ಹೆಸರಿನ ಒಂದು ರೂಪ, ಷಾಡ್ಗುಣ್ಯವೆಂಬ ಇನ್ನೊಂದು ರೂಪ,ಹಾಗೂ ಮಜ್ಜಾದಲ್ಲಿ ಭಗವಾನ್ ವಿಷ್ಣುವು ಆದಿನಾರಾಯಣ, ಸಾರಾತ್ಮಾ ಎಂಬ ಎರಡು ರೂಪಗಳಿಂದ ಇರುತ್ತಾನೆ.

**ಅಗ್ನಿಗೋಽಪಿ ದ್ವಿರೂಪಕಃ।**
**ಉಪೇಂದ್ರೋ ಹಂಸ ಇತಿ ವಿಷ್ಣುಃ ★ ॥ 6 ॥**

ಅಗ್ನಿಯಲ್ಲಿ ಉಪೇಂದ್ರ ಹಂಸ ಎಂಬ ವಿಷ್ಣುವಿನಎರಡು ರೂಪಗಳು ಇರುತ್ತವೆ.

**ಅಸ್ಥಿಷ್ವಥಾಪರಮ್ ।★**
**ವರ್ತತೇ ಚ ಹರೇ ರೂಪಂ ಷಷ್ಟ್ಯುತ್ತರಶತತ್ರಯಮ್ ।**
**ಮಜ್ಜಾಯಾಮಥ ತದ್ರೂಪಂ ಷಷ್ಟ್ಯುತ್ತರಶತತ್ರಯಮ್ ॥ 7 ॥**

**ಅಂಗುಲೀಪರ್ವಗಂ ರೂಪಂ ಷಷ್ಟ್ಯುತ್ತರಶತತ್ರಯಮ್ ।**
**ಅಶೀತ್ಯುತ್ತರಸಾಹಸ್ರಂ ಮಿಲಿತ್ವಾ ರೂಪಮೀಶಿತುಃ ॥ 8 ॥**

---

★ ಅನ್ವಯಾನುಸಾರ ಅರ್ಥ ಸುಲಭವಾಗಲು ಶ್ಲೋಕಗಳನ್ನು ವಿಭಜಿಸಲಾಗಿದೆ.

ಅಸ್ಥಿಗಳಲ್ಲಿ 360 ಭಗವಂತನ ರೂಪಗಳು, ಹಾಗೂ ಮಜ್ಜಾ ಎಂಬ ರಕ್ತಸಾರದಲ್ಲಿ 360 ಶ್ರೀಹರಿಯ ರೂಪಗಳು ಇರುತ್ತವೆ. ಹಾಗೂ ಅಂಗುಲಿ ಪರ್ವದಲ್ಲಿ 360 ಭಗವಂತನ ರೂಪಗಳು ಇರುತ್ತವೆ. ಒಟ್ಟುಸೇರಿ 1080 ಭಗವಂತನ ರೂಪಗಳು ಆಗುತ್ತವೆ.

ವಿವರಣೆ : ಷಷ್ಟಿತ್ರಿಶತಿರೂಪಾಣಿ ವರ್ತಂತೇ ತತ್ರ ಚಾಸ್ಥಿಷು ।
ಮಜ್ಜಾಯಾಮಪಿ ಶ್ರೀವಿಷ್ಣುಃ ಷಷ್ಟಿತ್ರಿಶತಿರೂಪಧೃಕ್ ॥
ಅಂಗುಲೀ ಪರ್ವಪೂರ್ವೇಷು ಷಷ್ಟಿತ್ರಿಶತಿರೂಪವಾನ್।
ಏವಂ ಹ್ಯಶೀತಿಸಾಹಸ್ರರೂಪಾಣ್ಯತ್ರಾಪಿ ವೈ ಹರೇಃ ॥

ಈ ಪ್ರಮಾಣ ವಚನವನ್ನು ಇಲ್ಲಿ ಸ್ಮರಿಸಬಹುದು.

ಶ್ರೀಹರಿಕಥಾಮೃತಸಾರದಲ್ಲಿ ಈ ವಿಷಯವನ್ನು ತಿಳಿಸಿರುವುದು ಗಮನಾರ್ಹ.

–ತೀವಿಕೊಂಡಿಹವಲ್ಲಿ ಮಜ್ಜಕ–
ಳೇವರದಲಂಗುಲಿಯ ಪರ್ವದ
ಠಾವಿನಲಿ ಮುನ್ನೂರು ಅರವತ್ತೆನಿಪ ತ್ರಿಸ್ಥಳದಿ ।
ಸಾವಿರದ ಎಂಭತ್ತುರೂಪವ
ಕೋವಿದರು ಪೇಳುವರು ದೇಹದಿ
ದೇವತೆಗಳೊಡಗೂಡಿ ಕ್ರೀಡಿಸುವನು ರಮಾರಮಣ ॥

(ವರ್ಣಪ್ರಕ್ರಿಯಾಸಂಧಿ 9–29)

**ಮನೋಮಯಶ್ಚ ವಿಜ್ಞಾನಮಯಾನಂದಮಯಸ್ತಥಾ ।**
**ಅನ್ನಪ್ರಾಣಮಯೌ ಚೇತಿ ಪಂಚಕೋಶಾಶ್ಚ ವರ್ಮವತ್ ॥ 9 ॥**

ಮನೋಮಯ, ವಿಜ್ಞಾನಮಯ, ಆನಂದಮಯ, ಅನ್ನಮಯ, ಪ್ರಾಣಮಯ ಎಂಬುದಾಗಿ ಐದುಕೋಶಗಳು ಕವಚದಂತೆ ಇರುತ್ತವೆ.

ವಿವರಣೆ:– ಈ ಪಂಚಕೋಶಗಳ ವಿವರಗಳನ್ನು ಶ್ರೀ ಹರಿಕಥಾಮೃತಸಾರದ ''ಭೋಜನರಸವಿಭಾಗ ಸಂಧಿ'' ಯಲ್ಲಿ ನೋಡಿಕೊಳ್ಳಬೇಕು.

**ಧಾತವಸ್ತತ್ರ ತನ್ನಾಮ್ನಾ ಪಂಚರೂಪಾಣಿ ವೈ ಹರೇಃ ।**
**ಸಂತಿ ತೇಷ್ವತ್ರ ಕೋಶೇಷು ಹ್ಯನಿರುದ್ಧಾದಿರೂಪಿಣಃ ॥ 10 ॥**

ದೇಹದಲ್ಲಿರುವ ಐದು ಧಾತುಗಳಲ್ಲಿ ಆಯಾ ಹೆಸರಿನಿಂದ ಶ್ರೀ ಹರಿಯ ಐದು ರೂಪಗಳು ಇರುತ್ತವೆ. ಈ ಕೋಶಗಳಲ್ಲಿ ಭಗವಂತನು ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ರೂಪಗಳಿಂದ ಇರುತ್ತಾನೆ.

**ವಿಷ್ಣುನಾ ಕ್ರಿಯಮಾಣಾಯಾಂ ಸೂಕ್ಷ್ಮಸೃಷ್ಟೌ ಹಿ ಸಾಧನಂ ।**
**ವರ್ಮವಲ್ಲಿಂಗದೇಹಸ್ಯ ಹ್ಯಸ್ತಿ ದೇಹಚತುಷ್ಟಯಮ್ ॥ 11 ॥**

ವಿಷ್ಣುವಿನಿಂದ ಮಾಡಲ್ಪಡುವ ಸೂಕ್ಷ್ಮ ಸೃಷ್ಟಿಯಲ್ಲಿ ಸಾಧನವಾಗಿ ಲಿಂಗದೇಹಕ್ಕೆ ಕವಚದಂತೆ ನಾಲ್ಕು ದೇಹಗಳು ಇರುತ್ತವೆ.

**ತತ್ರಾಪಿ ಷೋಡಶಕಲೋ ಲಿಂಗದೇಹೋಽಸ್ತ್ಯನಾದಿಗಃ ।**
**ಜೀವಾವರಣರೂಪೇಣ ತುಷವದ್ವರ್ತತೇ ಸದಾ ॥ 12 ॥**

ಅದರಲ್ಲಿ 16 ಕಲೆಗಳಿಂದ ಕೂಡಿದ ಅನಾದಿಯಾದ ಲಿಂಗದೇಹವು ಇದೆ. ಇದು ಜೀವನಿಗೆ ಆವರಣರೂಪದಿಂದ, ಧಾನ್ಯಕ್ಕೆ ಹೊಟ್ಟು ಮೇಲೆ ಆವರಣವಾಗಿರುವಂತೆ ಯಾವಾಗಲೂ ಇರುತ್ತದೆ.

ವಿವರಣೆ :- ಇಂದ್ರಿಯಾಣಿ ದಶೈಕಂ ಚ ಮನಸ್ತನ್ಮಾತ್ರಕಾಸ್ತಥಾ ।
ಪಂಚೈವಂ ಷೋಡಶಕಲಂ ಲಿಂಗದೇಹಮನಾದಿಮತ್ ॥
ಇತಿ ವಿಷ್ಣುರಹಸ್ಯೇ

ಶ್ರೀಹರಿಕಥಾಮೃತಸಾರದಲ್ಲಿ ಹೀಗೆ ತಿಳಿಸಿದ್ದಾರೆ

ಜೀವನಕೆ ತುಷದಂತೆ ಲಿಂಗವು
ಸಾವಕಾಶದಿ ಪೊಂದಿ ಸುತ್ತಲು
ಪ್ರಾವರಣರೂಪದಲಿ ಇಪ್ಪುದು ಭಗವದಿಚ್ಛೆಯಲಿ ॥ (9-13)

**ತಸ್ಮಿನ್ ಲಿಂಗಶರೀರೇಽಸ್ಮಿನ್ ಪುರುಷಾಖ್ಯೋ ಹರಿಃ ಸ್ವಯಂ ।**
**ಜೀವಸ್ವರೂಪದೇಹೇನ ಸ್ವರೂಪಾವಯವೈರಪಿ ॥ 13 ॥**

**ಸ್ವರೂಪೇಂದ್ರಿಯಸಂಯುಕ್ತೋ ಲಿಂಗದೇಹೇಽಸ್ತಿ ಸರ್ವದಾ ।**

ಆ ಲಿಂಗದೇಹದಲ್ಲಿ ಪುರುಷರೂಪದಿಂದ ಶ್ರೀ ಹರಿಯು ಸ್ವತಃ ಜೀವನ ಸ್ವರೂಪ ದೇಹ, ಸ್ವರೂಪಅವಯವ, ಸ್ವರೂಪೇಂದ್ರಿಯಗಳಿಂದ ಕೂಡಿದವನಾಗಿ ಯಾವಾಗಲೂ ಇರುತ್ತಾನೆ.

ವಿವರಣೆ –ಜೀವನ ಸ್ವರೂಪೇಂದ್ರಿಯದಲ್ಲಿ ಭಗವಂತನು ಆಯಾ ಇಂದ್ರಿಯಗಳಲ್ಲಿ ತನ್ನ ಇಂದ್ರಿಯಗಳಿಂದ ವ್ಯಾಪ್ತನಾಗಿ ಇರುತ್ತಾನೆ.

**ಅಶ್ವವಾಲಾಗ್ರಮಾದಾಯ ವಿಭಜ್ಯ ಶತಧಾ ಹಿ ತತ್ ॥ 14 ॥**
**ಪುನಶ್ಚ ಶತಧಾ ಭಿನ್ನಂ ಕಿಯನ್ಮಾನಂ ಭವಿಷ್ಯತಿ ।**

**ತಾವದ್ಬ್ರಹ್ಮಾದಿಜೀವಾನಾಂ ಪರಿಮಾಣಂ ಪ್ರಕೀರ್ತಿತಂ ॥ 15 ॥**

ಕುದುರೆಬಾಲದ ತುದಿಗೂದಲನ್ನು ತೆಗೆದುಕೊಂಡು ನೂರುಭಾಗ ಮಾಡಿ, ಅದರಲ್ಲಿ ಒಂದನ್ನು ಮತ್ತೆ ನೂರುಭಾಗ ಮಾಡಿದರೆ ಎಷ್ಟು ಪರಿಮಾಣವುಳ್ಳದ್ದಾಗುವುದೋ ಅಷ್ಟು ಸೂಕ್ಷ್ಮ ಪರಿಮಾಣವುಳ್ಳವರು ಬ್ರಹ್ಮಾದಿಯಾಗಿ ಸಕಲಜೀವರು ಎಂಬುದಾಗಿ ಹೇಳಲ್ಪಡುತ್ತಾರೆ.

ವಿವರಣೆ : ಶ್ರೀಹರಿಕಥಾಮೃತಸಾರದಲ್ಲಿ ಶ್ರೀಜಗನ್ನಾಥದಾಸರು ಇದನ್ನು ತಿಳಿಸುವ ಪರಿ ಹೀಗಿದೆ –

ಕುದುರೆ ಬಾಲದ ಕೊನೆಯ ಕೂದಲ
ತುದಿ ವಿಭಾಗವ ಮಾಡಿ ಶತವಿಧ
ವದರೊಳೊಂದನು ನೂರು ಭಾಗವ ಮಾಡಲೆಂತಿಹುದೋ ।
ವಿಧಿ ಭವಾದಿ ಸಮಸ್ತ ದಿವಿಜರ
ಮೊದಲು ಮಾಡಿ ತೃಣಾಂತ ಜೀವರೊ
ಳಧಿಕ ನ್ಯೂನತೆಯಿಲ್ಲವೆಂದಿಗೊ ಜೀವ ಪರಮಾಣು ॥ (9–7)

ಇದನ್ನೇ ತಿಳಿಸಿಕೊಡುವ ಇನ್ನೊಂದು ಪ್ರಮಾಣ ಹೀಗಿದೆ–

ಅಶ್ವ ಬಾಲಸ್ಥರೋಮಾಗ್ರಂ ಶತಭಾಗತಯಾ ಕೃತಂ ।
ತಾವತ್ ಪ್ರಮಾಣಂ ಜೀವಸ್ಯ ಸ್ವರೂಪಂ ಸದ್ಭಿರುಚ್ಯತೇ ।
ಬ್ರಹ್ಮಾದಿ ಸರ್ವಜೀವಾನಾಂ ಪ್ರಮಾಣಂ ಚೇದಮೇವ ಹಿ ॥

**ಜೀವಹೃತ್ಕರ್ಣಿಕಾಮಧ್ಯೇ ಜೀವಾಂಗುಷ್ಠ ಪ್ರಮಾಣಕಃ ।**
**ಆತ್ಮನಾಮಾ ಬಿಂಬರೂಪೀ ಪ್ರಾಜ್ಞ ಇತ್ಯಪಿ ಯಂ ವಿದುಃ ॥ 16 ॥**

ಜೀವನ ಹೃದಯಾಕಾಶದ ಅಷ್ಟದಳ ಕಮಲಕರ್ಣಿಕೆಯ ಮಧ್ಯಪ್ರದೇಶದಲ್ಲಿ ಜೀವನ ಅಂಗುಷ್ಠದ ಪರಿಮಾಣದಷ್ಟು ರೂಪದಿಂದ "ಆತ್ಮಾ" ಎಂಬ ಹೆಸರಿನ ಬಿಂಬರೂಪೀ ಭಗವಂತನು ಇರುತ್ತಾನೆ. ಇವನನ್ನು "ಪ್ರಾಜ್ಞ" ಎಂತಲೂ ಕರೆಯುತ್ತಾರೆ. ಜ್ಞಾನಿಗಳು ಹೀಗೆ ತಿಳಿಯುತ್ತಾರೆ.

ವಿವರಣೆ : ಶ್ರೀ ಹರಿಕಥಾಮೃತಸಾರದಲ್ಲಿ ಹೀಗೆ ತಿಳಿಸಿದ್ದಾರೆ.

ಬಿಂಬ ಜೀವಾಂಗುಷ್ಠಮಾತ್ರದಿ
ಇಂಬುಗೊಂಡಿಹ ಸರ್ವರೊಳು ಸೂ ।
ಕ್ಷ್ಮಾಂಬರದಿ ಹೃತ್ಕಮಲಮಧ್ಯನಿವಾಸಿಯೆಂದೆನಿಸಿ ।
ಎಂಬರೀತಗೆ ಕೋವಿದರು ವಿ-
ಶ್ವಂಭರಾತ್ಮ ಪ್ರಾಜ್ಞ ಭಕ್ತ ಕು-
ಟುಂಬಿ ಸಂತೈಸುವನು ಈ ಪರಿ ಬಲ್ಲ ಭಜಕರನು ॥ (9-9)

ಮತ್ತು "ಸ್ಥೂಲಾಂಗುಷ್ಠ ಮಿತೋ ದೇಹೇ ಜೀವಾಂಗುಷ್ಠಮಿತೋಹೃದಿ" ಇತ್ಯಾದಿ ಪ್ರಮಾಣಗಳು ಇದನ್ನೇ ತಿಳಿಸುತ್ತವೆ.

**ಸದಾ ಜೀವ್ಯವಿಯುಕ್ತಶ್ಚ ಜೀವಾಕಾರೇಣ ವರ್ತತೇ ।**
**ಜ್ಞಾನಾನಂದಾತ್ಮಕೋ ಜೀವೋ ಹರಿಸಂಕಲ್ಪತಸ್ತತಃ ॥ 17 ॥**

**ಅನಾದ್ಯವಿದ್ಯಾಕಾಮಕರ್ಮಭಿಶ್ಚಾಸ್ತಿ ಸರ್ವದಾ ।**
**ಲಿಂಗಭಂಗಸ್ತ್ವಸ್ಯ ನಾಶೋ ವಿಷ್ಣೂಪಾಸನಯಾ ಭವೇತ್ ॥ 18 ॥**

ಯಾವಾಗಲೂ ಜೀವನ ಜೊತೆಗೆ ಇರುವ ಭಗವಂತನು ಜೀವಾಕಾರನಾಗಿ ಇರುತ್ತಾನೆ. ಜ್ಞಾನಾನಂದಾದಿಸ್ವರೂಪಿಯಾದರೂ ಸಹ ಜೀವನು ಶ್ರೀಹರಿಯ ಸಂಕಲ್ಪದಂತೆ ಅನಾದಿ ಅವಿದ್ಯಾಕಾಮಕರ್ಮಗಳಿಂದ ಕೂಡಿರುತ್ತಾನೆ.

ಶ್ರೀವಿಷ್ಣುವಿನ ಉಪಾಸನೆಯಿಂದ ಲಿಂಗ ಶರೀರವು ಭಂಗವಾಗಿ ಅಂದರೆ ನಾಶವಾಗಿ ಸ್ವರೂಪ ಸುಖವನ್ನು ಅನುಭವಿಸುತ್ತಾನೆ.

ವಿವರಣೆ: 1) ಜೀವನು ಅವಿದ್ಯಾಕಾಮಕರ್ಮಗಳಿಂದ ಕೂಡಿರುವುದನ್ನು ಶ್ರೀಮದ್‌ಭಾಗವತದಲ್ಲಿ ತಿಳಿಸಿದ್ದಾರೆ –

ಅತಃ ಕಾಯಮಿಮಂ ವಿದ್ವಾನ್ ಅವಿದ್ಯಾಕಾಮಕರ್ಮಭಿಃ ।
ಆರಬ್ಧ ಇತಿ ನೈವಾಸ್ಮಿನ್ ಪ್ರತಿಬುದ್ಧೋಽನುಷಜ್ಜತೇ ॥ (4-20-5)

2) ಭಗವಂತನು ಜೀವಾಕಾರನಾಗಿ ಇರುತ್ತಾನೆ. ಇದಕ್ಕೆ ಪ್ರಮಾಣ ಹೀಗಿದೆ.

ಜೀವಸ್ಯಾಕಾರ ತದ್ರೂಪೀ ಜ್ಞಾನಾನಂದಸ್ವರೂಪವಾನ್ ॥

**ಅಹಂ ಮಮೇತಿ ಸ್ವಾತಂತ್ರ್ಯಬುದ್ಧ್ಯಾ ಸಂಸರಣಂ ಸದಾ ।**
**ಜೀವಸ್ತ್ವೈಂದ್ರಿಯಾಣಾಂ ಹಿ ಸ್ವರೂಪೇಂದ್ರಿಯತೋ ಯದಾ ॥ 19 ॥**

**ಸಂಬಂಧೋ ಭವಿತಾ ತರ್ಹಿ ವಿಷಯಜ್ಞಾನಮಿಷ್ಯತೇ ।**
**ದೇವಾನಾಮಂಶತೋ ವ್ಯಾಪ್ತಿಃ ಶರೀರೇಷು ಚ ವರ್ತತೇ ॥ 20 ॥**

**ದೇಹೇ ಪ್ರಕಾಶತೋ ವ್ಯಾಪ್ತಿಃ ಮನುಷ್ಯಾಣಾಂ ಭವಿಷ್ಯತಿ ।**

ನಾನು ನನ್ನದು ಎಂಬ ಸ್ವಾತಂತ್ರ್ಯ ಬುದ್ಧಿ ಯಿಂದ ಕೂಡಿದ ಜೀವನು ಯಾವಾಗಲೂ ಪುನರ್ಜನ್ಮವನ್ನು ಪಡೆಯುತ್ತಾನೆ. (ಸಂಸಾರವನ್ನು ಹೊಂದುತ್ತಾನೆ) ಜೀವನ ಇಂದ್ರಿಯಗಳಿಗೂ ಸ್ವರೂಪೇಂದ್ರಿಯಗಳಿಗೂ ಯಾವಾಗ ಸಂಬಂಧ ಉಂಟಾಗುವದೋ ಆಗ ವಿಷಯ ಪದಾರ್ಥಗಳ ಜ್ಞಾನವು ಆಗುತ್ತದೆ. ದೇವತೆಗಳಿಗೆ ಶರೀರದಲ್ಲಿ ಅಂಶದಿಂದ ವ್ಯಾಪ್ತಿಯು ಇರುತ್ತದೆ.ಜೀವರಿಗೆ ದೇಹದಲ್ಲಿ ಪ್ರಕಾಶರೂಪೇಣ ವ್ಯಾಪ್ತಿಯು ಇರುತ್ತದೆ.

ವಿವರಣೆ: ಅಹಂ ಮಮಕಾರಗಳು ಸಂಸಾರವನ್ನು ತಂದುಕೊಡುತ್ತವೆಯೆಂಬ ವಿಷಯವನ್ನು ಶ್ರೀಮದ್ ಭಾಗವತದಲ್ಲಿ (10-40-23) ತಿಳಿಸಿದ್ದಾರೆ.

ಭಗವನ್ ಜೀವಲೋಕೋಽಯಂ ಮೋಹಿತಸ್ತವ ಮಾಯಯಾ ।
ಅಹಂ ಮಮೇತ್ಯಸದ್ಗ್ರಾಹೋ ಭ್ರಾಮ್ಯತೇ ಕರ್ಮವರ್ತ್ಮಸು ॥

ಇನ್ನು ಮನುಷ್ಯರಿಗೆ ದೇಹದಲ್ಲಿ ಪ್ರಕಾಶರೂಪೇಣ ವ್ಯಾಪ್ತಿ ಇದೆಯೆಂಬುದನ್ನು ಓಂ ಗುಣಾದ್ವಾಽಽಲೋಕವತ್ ಓಂ(2-3-26) ಸೂತ್ರದಲ್ಲಿ ಸೂತ್ರಕಾರರು ತಿಳಿಸಿದ್ದಾರೆ.

**ದೇಹೇಽಸ್ಮಿನ್ ನಾಭಿತೋಽಧಸ್ತಾತ್ ಷಡಂಗುಲಮಿತಸ್ಥಲಮ್ ॥21॥**

**ಆರಭ್ಯ ಚೋತ್ತಮಾಂಗಾಂತಂ ಬ್ರಹ್ಮನಾಡ್ಯಸ್ತಿ ಸೂಕ್ಷ್ಮತಃ ।**
**ಏಕಂ ಸಹಸ್ರಧಾ ಕೃತ್ವಾ ರೋಮ ತತ್ರೈಕಭಾಗಕಮ್ ॥ 22 ॥**

**ಕಿಯತ್ಸೂಕ್ಷ್ಮಂ ತಥಾ ಬ್ರಹ್ಮನಾಡೀ ಸೂಕ್ಷ್ಮಾಸ್ತ್ರರಂಧ್ರಿಕಾ ।**
**ವಜ್ರಿಕಾಽಽಯಾ ಪ್ರಕಾಶಿನ್ಯಾ ವೈದ್ಯುತಾ ಬ್ರಹ್ಮನಾಡಿಕಾ ॥ 23 ॥**

**ಇತಿ ಪಂಚಪ್ರಭೇದೇನ ಸುಷುಮ್ನಾ ಪರಿಕೀರ್ತಿತಾ ॥**

ಈ ದೇಹದಲ್ಲಿ ನಾಭಿಯಿಂದ ಆರು ಅಂಗುಲ ಕೆಳಗೆಇರುವ ಮೂಲಾಧಾರದಿಂದ ಆರಂಭಮಾಡಿ ಶಿರಸ್ಸಿನವರೆಗೆ (ಬ್ರಹ್ಮರಂಧ್ರಪರ್ಯಂತ) ಸೂಕ್ಷ್ಮವಾದ ಬ್ರಹ್ಮನಾಡಿಯು ಇರುತ್ತದೆ. ತಲೆಕೂದಲನ್ನು ಸಾವಿರಭಾಗಮಾಡಿದರೆ ಅದರ ಒಂದು ಭಾಗವು ಎಷ್ಟು ಸೂಕ್ಷ್ಮವಿರುವುದೋ ಅಷ್ಟು ಪ್ರಮಾಣವಿರುವ

ಬ್ರಹ್ಮನಾಡಿಯು ಶಿರಸ್ಸಿನವರೆಗೆ ವ್ಯಾಪಿಸಿರುತ್ತದೆ. ಇದಕ್ಕೆ ಸುಷುಮ್ನಾ ನಾಡಿಯೆಂತಲೂ ಕರೆಯುತ್ತಾರೆ. ಈ ಸುಷುಮ್ನಾನಾಡಿಯ ಸುತ್ತಲೂ (ಪಶ್ಚಿಮ, ಉತ್ತರ, ಪೂರ್ವ, ದಕ್ಷಿಣ) 4 ದಿಕ್ಕುಗಳಲ್ಲಿ ವಜ್ರಿಕಾ, ಆರ್ಯಾ, ಪ್ರಕಾಶಿನೀ, ವೈದ್ಯುತಾ ಎಂಬ ನಾಡಿಗಳಿರುತ್ತವೆ. ಹೀಗೆ ಸುಷುಮ್ನಾನಾಡಿಯು 5 ಪ್ರಭೇಧಗಳಿಂದ ಕೂಡಿರುವುದೆಂದು ಹೇಳಲ್ಪಡುತ್ತದೆ.

ವಿವರಣೆ : ಈ ಮೇಲೆ ತಿಳಿಸಿದ ವಿಷಯವನ್ನು ಶ್ರೀ ಹರಿಕಥಾಮೃತಸಾರದಲ್ಲಿ ಹೀಗೆ ತಿಳಿಸಿದ್ದಾರೆ.

ಕೇಶ ಸಾಸಿರ ವಿಧ ವಿಭಾಗವ
ಗೈಸಲೆನಿತಿಹ ಸುಷುಮ್ನವು
ಆಶಿರಾಂತದಿ ವ್ಯಾಪಿಸಿಹುದೀ ದೇಹಮಧ್ಯದಿ ।
ಆ ಸುಷುಮ್ನಕೆ ವಜ್ರಿಕಾರ್ಯ ಪ್ರ
ಕಾಶಿನೀ ವೈದ್ಯುತಗಳಿಹವು ಪ್ರ
ದೇಶದಲಿ ಪಶ್ಚಿಮಕೆ ಉತ್ತರ ಪೂರ್ವ ದಕ್ಷಿಣಕೆ ॥ (9-17)

ಮತ್ತು ಸುಷುಮ್ನಾ ನಾಡಿಯು ಐದು ಪ್ರಭೇದಗಳಿಂದ ಕೂಡಿರುವ ವಿಷಯವನ್ನು ತಂತ್ರಸಾರದಲ್ಲಿ ತಿಳಿಸಿದ್ದಾರೆ–

"ಮೂಲಾಧಾರಂ ಸಮಾರಭ್ಯ ಯಾವನ್ಮೂರ್ಧಾನಮಾಸ್ಥಿತಾ ।
ಮಧ್ಯೇ ಸುಷುಮ್ನಾ ವಿಜ್ಞೇಯಾ ವಜ್ರಿಕಾऽऽರ್ಯಾ ಪ್ರಕಾಶಿನೀ ।
ವೈದ್ಯುತಾ ಬ್ರಹ್ಮನಾಡೀ ತು ಸೈವ ಪಂಚಪ್ರಭೇದಿನೀ ॥"

**ಬ್ರಹ್ಮನಾಡೀ ಪೃಷ್ಠಭಾಗೇ ವಜ್ರಿಕಾ ತತ್ರ ವೈ ಹರಿಃ ॥ 24 ॥**

**ಹರಿದ್ವರ್ಣೋऽಸ್ತಿ ಪ್ರದ್ಯುಮ್ನಃ ತದ್ವಾಮೇ ಚಾऽಽರ್ಯಕಾऽಸ್ತಿ ಹಿ ।**
**ನೀಲವರ್ಣೋऽನಿರುದ್ಧೋऽಸ್ಯಾಂ ವರ್ತತೇ ಚ ತದಗ್ರತಃ ॥ 25 ॥**

**ನಾಡೀ ಪ್ರಕಾಶಿನೀ ತತ್ರ ವಾಸುದೇವೋऽಸ್ತಿ ಪಾಂಡುರಃ ।**
**ತಸ್ಯ ದಕ್ಷಿಣಭಾಗಸ್ಥಾ ವೈದ್ಯುತಾ ನಾಡಿರಿಷ್ಯತೇ ॥ 26 ॥**

**ಸಂಕರ್ಷಣಃ ಪಿಂಗವರ್ಣಃ ತತ್ರಾऽಸ್ತೇ ಮಧ್ಯಗಾ ತು ಯಾ ।**
**ಬ್ರಹ್ಮನಾಡೀ ತು ತತ್ರಾಸ್ತಿ ರಕ್ತೋ ನಾರಾಯಣಃ ಸದಾ ॥ 27 ॥**

ಬ್ರಹ್ಮನಾಡಿಯ ಹಿಂಭಾಗದಲ್ಲಿ ವಜ್ರಿಕಾನಾಡಿಯು ಇರುತ್ತದೆ. ಇದು ಹರಿದ್ವರ್ಣ (ಹಸಿರುವರ್ಣ)ವಾಗಿರುವದು. ಈ ನಾಡಿಯಲ್ಲಿ ಪ್ರದ್ಯುಮ್ನನಾಮಕ ಶ್ರೀಹರಿ ಇರುವವನು. ಬ್ರಹ್ಮನಾಡಿಯ ಎಡಪಾರ್ಶ್ವಕ್ಕೆ ಆರ್ಯಕಾ ನಾಡಿ ಇರುವದು. ಇದು ನೀಲವರ್ಣವಾಗಿದ್ದು ಇದರಲ್ಲಿ ಅನಿರುದ್ಧನಾಮಕ ಶ್ರೀಹರಿಯು ಇರುವನು. ಬ್ರಹ್ಮನಾಡಿಯ ಮುಂಭಾಗದಲ್ಲಿ ಪ್ರಕಾಶಿನೀ ಎಂಬ ನಾಡಿ ಇರುವದು. ಇದು ಶ್ವೇತವರ್ಣಯುಕ್ತವಾಗಿ ಇರುವುದು. ಇದರಲ್ಲಿ ವಾಸುದೇವನಾಮಕ ಶ್ರೀಹರಿಯು ಇರುವನು. ಬ್ರಹ್ಮನಾಡಿಯ ಬಲಪಾರ್ಶ್ವಕ್ಕೆ (ದಕ್ಷಿಣಕ್ಕೆ) ಇರುವ ನಾಡಿಯೇ ವೈದ್ಯುತಾ ಎನಿಸಿದೆ. ಇದು ಪೀತವರ್ಣವಾಗಿದ್ದು ಸಂಕರ್ಷಣ ನಾಮಕ ಶ್ರೀಹರಿಯು ಇಲ್ಲಿ ಇರುತ್ತಾನೆ. ಬ್ರಹ್ಮನಾಡಿಯ ಮಧ್ಯಭಾಗದಲ್ಲಿ ಸುಷುಮ್ನಾನಾಡಿ ಇದೆ. ಇದು ರಕ್ತವರ್ಣವಿಶಿಷ್ಟವಾಗಿದೆ. ಇಲ್ಲಿ ಶ್ರೀನಾರಾಯಣ ರೂಪೀ ಶ್ರೀಹರಿಯು ಇರುತ್ತಾನೆ.

ವಿವರಣೆ : ಈ ಮೇಲಿನ ವಿವರಗಳನ್ನು ಮಾನಸ ಸ್ಮೃತಿಯಲ್ಲಿ ಹೀಗೆ ತಿಳಿಸಿದ್ದಾರೆ.

''ಮಧ್ಯಾಂಶ ಬ್ರಹ್ಮನಾಡ್ಯಾಂ ತು ಧ್ಯೇಯೋ ನಾರಾಯಣೋಽರುಣಃ ।
ತತ್ಪುರಾಂಶ ಪ್ರಕಾಶಿನ್ಯಾಂ ವಾಸುದೇವೋಽಸಿತಪ್ರಭಃ ॥
ದಕ್ಷಾಂಶವೈದ್ಯುತಾಸಂಸ್ಥಃ ಪಿಂಗಃ ಸಂಕರ್ಷಣೋಽಚ್ಯುತಃ ।
ಪೃಷ್ಠಾಂಶವಜ್ರಿಕಾಸಂಸ್ಥಃ ಪ್ರದ್ಯುಮ್ನೋ ಹರಿತಪ್ರಭಃ ॥
ಆರ್ಯಕಾಯಾಂ ಗತಶ್ಚಿಂತ್ಯೋ ನೀಲವರ್ಣೋಽನಿರುದ್ಧಕಃ ।''

ನಾಡೀಪ್ರಕರಣಸಂಧಿ 35ನೇ ಪದ್ಯ, ಹಾಗೂ ಛಾಂದೋಗ್ಯ ಭಾಷ್ಯಗಳಲ್ಲಿ ಇದರ ವಿವರಣೆ ಇದೆ.

**ನಾಡೀಷು ಮೂಲಸ್ಥಾನೇಷು ಪಂಚ ಪದ್ಮಾನಿ ಸಂತಿ ಹಿ ।**
**ಚತುರ್ದಶಸುರಕ್ತಾನಿ ಕೋಮಲಾನಿ ತದೂರ್ಧ್ವತಃ ॥ 28 ॥**

**ವರ್ತತೇ ಚ ತ್ರಿಕೋಣೇಷು ವಹ್ನಿಮಂಡಲಪಂಚಕಮ್ ।**
**ಉಕ್ತವರ್ಣಾಶ್ಚ ಪ್ರದ್ಯುಮ್ನಪೂರ್ವಾಸ್ಸಂತ್ಯೇಷು ವೈ ಕ್ರಮಾತ್ ॥ 29 ॥**

**ನಾಭಿಸ್ಥಾನೇಷು ಪಂಚಾನಾಂ ನಾಡೀನಾಂ ಪಂಚ ಸಂತಿ ಹಿ ।**
**ಸುರಕ್ತ ಷಡ್ದಳೋಪೇತ ಪದ್ಮಾನ್ಯತಿಮೃದೂನಿ ಚ ॥ 30 ॥**

**ತದೂರ್ಧ್ವಸ್ತಂ ಷಡ್ರಸಂ ಚ ವಾಯುಮಂಡಲಜಾಲಕಂ ।**
**ತದೂರ್ಧ್ವಮುಕ್ತವರ್ಣಾಶ್ಚ ಪ್ರದ್ಯುಮ್ನಾದ್ಯಾಃ ಕ್ರಮಾತ್ ಸ್ಥಿತಾಃ ॥ 31 ॥**

ನಾಡಿಗಳ ಮೂಲಸ್ಥಾನದಲ್ಲಿ ಐದು ಕಮಲಗಳು ಇರುತ್ತವೆ. ಅವುಗಳ ಮೇಲೆ ಹದಿನಾಲ್ಕು ಕೋಮಲವಾದ ಕೆಂಪುಬಣ್ಣದ ಕಮಲಗಳು ಇವೆ. ನಾಡಿಗಳ ಮೇಲೆ ತ್ರಿಕೋಣದಲ್ಲಿ ವಹ್ನಿಮಂಡಲ ಪಂಚಕವಿರುತ್ತವೆ. ಅಲ್ಲಿ ಹೇಳಿದ ವರ್ಣಗಳು ಹಾಗೂ ಪ್ರದ್ಯುಮ್ನ ಮೊದಲಾದ ರೂಪಗಳು ಕ್ರಮವಾಗಿ ಇರುತ್ತವೆ. ಹೊಕ್ಕಳಿನ ಸ್ಥಾನದಲ್ಲಿ ಐದು ರೂಪಗಳು ಐದುನಾಡಿಗಳಲ್ಲಿ ಇರುತ್ತವೆ. ಕೆಂಪಗಾದ ಆರುದಳಗಳುಳ್ಳ ಮೃದುವಾದ ಪದ್ಮಗಳು ಇರುತ್ತವೆ. ಅದರ ಮೇಲೆ ಆರು ರಸಗಳಿಂದ ಕೂಡಿದ ವಾಯು ಮಂಡಲವಿರುತ್ತದೆ. ಅದರ ಮೇಲೆ ಹೇಳಲ್ಪಟ್ಟ ಎಲ್ಲ ವರ್ಣಗಳು ಪ್ರದ್ಯುಮ್ನಾದಿ ಭಗವದ್ರೂಪಗಳು ಕ್ರಮವಾಗಿ ಇರುತ್ತವೆ.

ನಾಡಿಗಳ ಮೂಲಸ್ಥಾನದಲ್ಲಿ ಹೇಳಿರುವ ಕಮಲಗಳ ವಿವರಣೆ ಉಪಾಸನಾಭೇದದಿಂದ ಬೇರೆಬೇರೆಯಾಗಿರುತ್ತದೆ.

**ನಾಡೀಷು ಹೃದಯಸ್ಥಾನೇ ಸುರಕ್ತಾಷ್ಟದಳಾನಿ ಚ ।**
**ಪದ್ಮಾನಿ ಸಂತಿತಾನ್ಯದ್ಧಾ ದೇವತಾಧಿಷ್ಠಿತಾನಿ ಚ ॥ 32 ॥**

ಹೃದಯಸ್ಥಾನದ ನಾಡಿಗಳಲ್ಲಿ ಎಂಟುದಳದ ಕೆಂಪುಬಣ್ಣದ ಪದ್ಮಗಳು ಇರುತ್ತವೆ. ಅವು ದೇವತೆಗಳ ಅಧಿಷ್ಠಾನವಾಗಿವೆ.

**ಸೌರದ್ವಾದಶ ಸಂಯುಕ್ತಮಂಡಲಾನಿ ತದೂರ್ಧ್ವತಃ ।**
**ತದೂರ್ಧ್ವಂ ತತ್ರ ಕೋಣೇಷು ವಹ್ನಿಮಂಡಲಸಂಚಯಃ ॥ 33 ॥**

ಅದರ ಮೇಲೆ ಹೃದಯದಲ್ಲಿ ಹನ್ನೆರಡು ಸೂರ್ಯ ಮಂಡಲಗಳು ಇರುತ್ತವೆ. ಸೂರ್ಯಮಂಡಲದ ಕೋಣಗಳಲ್ಲಿ ವಹ್ನಿಮಂಡಲಸಮೂಹವಿರುತ್ತದೆ.

ವಿವರಣೆ- ಉರಃಸ್ಥಾನದಲ್ಲಿ 12ದಳದ ಕಮಲವಿದೆ. ಈ ಕಮಲದ ಒಂದೊಂದು ದಳದಲ್ಲಿ ಒಬ್ಬೊಬ್ಬ ಸೂರ್ಯನಂತೆ 12 ಜನಸೂರ್ಯರಿದ್ದಾರೆ ಎಂದು ಮುಕ್ತಿತತ್ತ್ವವು ತಿಳಿಸುತ್ತದೆ. (ಮು.ತ. 315)

ಮೂಲಪಾಠದಲ್ಲಿ ಸೌರಸಾಹಸ್ರ ಶಬ್ದ ಇದೆ. ಜ್ಞಾನಿಗಳಲ್ಲಿ ಭಿನ್ನಾಭಿಪ್ರಾಯ ಇದೆ.

**ತದೂರ್ಧ್ವಮುಕ್ತವರ್ಣಾಶ್ಚ ಪ್ರದ್ಯುಮ್ನಾದ್ಯಾಃ ಕ್ರಮಾತ್ ಸ್ಥಿತಾಃ ।**
**ಸುಶುಕ್ಲ ಷೋಡಶದಳ ಪದ್ಮಾನ್ಯತಿಮೃದೂನಿ ಚ ॥ 34 ॥**

ಅದರ ಮೇಲೆ ಈ ಪದ್ಮಗಳಲ್ಲಿ ಶುಕ್ಲವರ್ಣದ ಹದಿನಾರು ದಳದ ಅತಿಮೃದುವಾದ ಪದ್ಮಗಳು ಇರುತ್ತವೆ.ಅಲ್ಲಿ ಹಿಂದೆ ಹೇಳಿದ ಬಣ್ಣಗಳಿರುವ,

ಪ್ರದ್ಯುಮ್ನ ಅನಿರುದ್ಧ, ವಾಸುದೇವ, ಸಂಕರ್ಷಣ ಮೊದಲಾದ ಭಗವಂತನರೂಪಗಳು ಇರುತ್ತವೆ.

**ತಾಸು ನಾಡೀಷು ಜಠರೇ ಸ್ಥಾನೇ ಸಂತ್ಯತ್ರ ಸಂಸ್ಥಿತಾಃ ।**
**ಉಕ್ತವರ್ಣಾಶ್ಚ ಪ್ರದ್ಯುಮ್ನಪ್ರಮುಖಾ ಹರಿರೂಪಕಾಃ ॥ 35 ॥**

ಉರಃಸ್ಥಾನದ ಆ ನಾಡಿಗಳಲ್ಲಿ ಮೇಲೆ ಹೇಳಿದ ಬಣ್ಣಗಳಿಂದ ಕೂಡಿದ ಭಗವಂತನ ಪ್ರದ್ಯುಮ್ನ ಮೊದಲಾದ ಪ್ರಮುಖ ರೂಪಗಳು ಇರುತ್ತವೆ.

**ತಾಲು ಮೂಲೇಷು ನಾಡೀಷು ಸಶುಕ್ಲದ್ವಿದಳಾನಿ ತು ।**
**ಪದ್ಮಾನಿ ಸಂತಿ ತೇಷೂರ್ಧ್ವಂ ವರ್ತುಳಂ ಚಂದ್ರಮಂಡಲಂ ।**
**ತತ್ರೋಕ್ತವರ್ಣಸಂಯುಕ್ತಾಃ ಪ್ರದ್ಯುಮ್ನಾದ್ಯಾಶ್ಚ ಸಂಸ್ಥಿತಾಃ ॥ 36 ॥**

ತಾಲು ಮೂಲದ ನಾಡಿಗಳಲ್ಲಿ ಎರಡುದಳದ ಬಿಳಿ ಪದ್ಮಗಳು ಐದು ಇರುತ್ತವೆ. ಅವುಗಳ ಮೇಲೆ ವರ್ತುಲಾಕಾರದ ಚಂದ್ರಮಂಡಲವಿರುತ್ತದೆ. ಅಲ್ಲಿ ಹಿಂದೆ ಹೇಳಿದ ವರ್ಣಗಳಿಂದ ಕೂಡಿದ ಪ್ರದ್ಯುಮ್ನವಾಸುದೇವಾದಿ ಭಗವದ್ರೂಪಗಳು ಇರುತ್ತವೆ.

ವಿವರಣೆ – ಇಲ್ಲಿ ಪ್ರದ್ಯುಮ್ನನ ಉಲ್ಲೇಖವಿದ್ದರೂ ಮುಕ್ತಿತತ್ತ್ವಕ್ಕನುಸಾರವಾಗಿ ಹೀಗೆ ಬದಲಾಯಿಸಿದೆ. ಇದರಂತೆ ಮುಂದೂ ಸಹ ತಿಳಿಯಬೇಕು.

**ಚತುರ್ದಳಸುಶುಕ್ಲಾನಿ ಪದ್ಮಾನ್ಯಾಸು ಭ್ರುವೋಽಂತರೇ ॥ 37 ॥**

**ತೇಷು ತ್ರಿಕೋಣ ಸಂಯುಕ್ತವಹ್ನಿಮಂಡಲ ಸಂಸ್ಥಿತಾಃ ।**
**ಉಕ್ತವರ್ಣಾಶ್ಚ ಪ್ರದ್ಯುಮ್ನಪ್ರಮುಖಾಃ ಸಂತಿ ತತ್ರ ಹಿ ॥ 38 ॥**

ಭ್ರೂ ಮಧ್ಯದಲ್ಲಿ ನಾಲ್ಕು ದಳದ ಬಿಳಿ ಪದ್ಮಗಳಿರುತ್ತವೆ. ಅವುಗಳಲ್ಲಿ ಪ್ರತ್ಯೇಕವಾಗಿ ತ್ರಿಕೋಣದಿಂದ ಕೂಡಿದ ವಹ್ನಿಮಂಡಲದಲ್ಲಿ ಪ್ರದ್ಯುಮ್ನ– ವಾಸುದೇವ ಮೊದಲಾದ ಪಂಚ ಭಗವದ್ರೂಪಗಳು ಇರುತ್ತವೆ.

ಹೆಚ್ಚಿನ ವಿವರಣೆಗಾಗಿ ತಂತ್ರಸಾರ ನೋಡಿರಿ.

**ಸುಶುಕ್ಲದ್ವಾದಶದಳಪದ್ಮಾನ್ಯತಿಮೃದೂನಿ ಚ ।**
**ಶಿರೋಗತಶಿರಾಸ್ವಂತರ್ವರ್ತಂತೇ ಶಶಿನೋಽತ್ರ ಹಿ ।**
**ಸಂತಿ ವರ್ತುಲಬಿಂಬಾನಿ ಪ್ರದ್ಯುಮ್ನಾದ್ಯಾಶ್ಚ ತತ್ರಗಾಃ ॥ 39 ॥**

ತಲೆಯಲ್ಲಿ ಅತಿಮೃದುವಾದ ಹನ್ನೆರಡು ದಳದ ಐದು ಬಿಳಿ ಪದ್ಮಗಳು ಇರುತ್ತವೆ. ಅಲ್ಲಿ ಒಳಗಡೆ ನಾಡಿಗಳಲ್ಲಿ ಐದು ಚಂದ್ರಮಂಡಲವಿರುತ್ತವೆ. ವರ್ತುಲಾಕಾರದ ಚಂದ್ರಬಿಂಬಗಳಲ್ಲಿ ಪ್ರದ್ಯುಮ್ನಾದಿಭಗವದ್ರೂಪಗಳು ಇರುತ್ತವೆ.

**ಏವಂ ಪಂಚಪ್ರಭೇದೇನ ಸುಷುಮ್ನಾ ದೇಹ ಮಧ್ಯಗಾ ॥ 40 ॥**

ಹೀಗೆ ಐದು ಪ್ರಭೇದಗಳಿಂದ ಕೂಡಿದ ಸುಷುಮ್ನಾನಾಡಿಯು ದೇಹದ ಮಧ್ಯದಲ್ಲಿ ವ್ಯಾಪಿಸಿರುತ್ತದೆ.

**ವಜ್ರಿಕೇಡಾಧಾರಿಣೀ ಚ ಪಿಂಗಲಾ ನಾಮಿಕಾ ಶಿರಾಃ ।**
**ಪಶ್ಚಿಮಾದಿ ಚತುರ್ದಿಕ್ಷುಸುಷುಮ್ನಾದ್ಯಾಸ್ತುಸಂತಿ ಹಿ ॥ 41 ॥**

ವಜ್ರಿಕಾ, ಇಡಾ, ಧಾರಿಣೀ (ನಂದಿನೀ) ಪಿಂಗಳಾ ಹೆಸರಿನ ನಾಡಿಗಳು ಪಶ್ಚಿಮ, ಉತ್ತರ, ಪೂರ್ವ, ದಕ್ಷಿಣ ಈ ನಾಲ್ಕು ದಿಕ್ಕುಗಳಲ್ಲಿ ಸುಷುಮ್ನಾ ನಾಡಿಯ ಸುತ್ತಲೂ ಇರುತ್ತವೆ.

**ಆಸು ನಾಡೀಷು ಹೃದಯಸಮದೇಶೇ ಹರಿಃ ಸ್ವಯಂ ।**
**ಪ್ರದ್ಯುಮ್ನಾದಿ ಸ್ವರೂಪೇಣ ವರ್ತತೇ ತಾಃ ಶಿರಾ ವಿನಾ ॥ 42 ॥**

ಈ ನಾಲ್ಕು ನಾಡಿಗಳಲ್ಲಿ ಶಿರಸ್ಸಿನ ಹೊರತಾಗಿ ಹೃದಯದ ಸಮದೇಶದಲ್ಲಿ ಸ್ವಯಂ ಶ್ರೀಹರಿಯು ಪ್ರದ್ಯುಮ್ನ, ಅನಿರುದ್ಧ, ವಾಸುದೇವ, ಸಂಕರ್ಷಣ ಸ್ವರೂಪದಿಂದ ಇರುತ್ತಾನೆ.

ಈ ವಿಷಯವನ್ನು ಶ್ರೀಮಧ್ವರು ಛಾಂದೋಗ್ಯ ಭಾಷ್ಯದಲ್ಲಿವಿವರಿಸಿದ್ದಾರೆ

"ಸ ಏಷ ಹೃದಿ ನಾಡೀಷು ಪಂಚರೂಪಃ ಪ್ರತಿಷ್ಠಿತಃ ।
ವಿಷ್ಣೋರಣಿಮ್ನೋರೂಪಾಣಿ ಪಂಚನಾಡೀಸ್ಥಿತಾನಿ ತು ॥
ನಾರಾಯಣಾಖ್ಯಂ ಸೌಷುಮ್ನಂ ಮಧ್ಯಸ್ಥಂ ರಕ್ತವರ್ಣಕಮ್।
ಶುಕ್ಲಂ ತು ವಾಸುದೇವಾಖ್ಯಂ ನಂದಿನ್ಯಾಮಗ್ರತಃ ಸ್ಥಿತಮ್ ॥
ಪಿಂಗಲಾಯಾಂ ಪಿಂಗಲಂ ಚ ರೂಪಂ ಸಂಕರ್ಷಣಾಭಿಧಂ ।
ಪಶ್ಚಿಮೇ ವಜ್ರಿಕಾಯಾಂ ಚ ಪೀತಂ ಪ್ರದ್ಯುಮ್ನ ನಾಮಕಂ ॥
ಇಡಾಯಾಮನಿರುದ್ಧಾಖ್ಯಂ ನೀಲರೂಪಂ ವ್ಯವಸ್ಥಿತಮ್ ॥"

ಎಂಬುದಾಗಿ.

**ದ್ವಾಸಪ್ತತಿಸಹಸ್ರಾಣಿ ಹೃದಯೇ ಸಂತಿ ನಾಡಿಕಾಃ ।**
**ಸಷಟ್‌ತ್ರಿಂಶತ್ ಸಹಸ್ರಾಣಿ ನಾಡ್ಯೋ ದಕ್ಷಾತ್ತು ವಾಮಗಾಃ ॥ 43 ॥**

ಮಾನವನ ಹೃದಯದಲ್ಲಿ 72 ಸಾವಿರ ನಾಡಿಗಳು ಇರುತ್ತವೆ. ಇವುಗಳಲ್ಲಿ 36 ಸಾವಿರ ನಾಡಿಗಳು ಬಲ ಬದಿಯಲ್ಲಿ ಹಾಗೂ 36 ಸಾವಿರ ನಾಡಿಗಳು ಎಡಬದಿಯಲ್ಲಿ ಇರುತ್ತವೆ.

**ಸಷಟ್‌ತ್ರಿಂಶತ್ ಸಹಸ್ರಾಣಿ ನಾಡ್ಯೋ ವಾಮಾತ್ತು ದಕ್ಷಿಣಾಃ ।**
**ಷಟ್‌ತ್ರಿಂಶದಕ್ಷರೋಪೇತಂ ಬೃಹತೀಛಂದಸಾ ತತಂ ॥ 44 ॥**

36 ಸಾವಿರ ನಾಡಿಗಳು ಎಡಬದಿಯಲ್ಲಿ, ಮತ್ತು 36,000 ಬಲಬದಿಯಲ್ಲಿ ಇರುತ್ತವೆ. 36 ಅಕ್ಷರಗಳುಳ್ಳ ಬೃಹತೀ ಮಂತ್ರಗಳಿಂದ (ಒಟ್ಟು ಅಕ್ಷರ ಸಂಖ್ಯೆ 36,000) ಇವು ವ್ಯಾಪ್ತವಾಗಿವೆ.

ವಿವರಣೆ: ಈ ಮೇಲಿನ ವಿಷಯವನ್ನು ಶ್ರೀಮಧ್ವರು ತಂತ್ರಸಾರ ಸಂಗ್ರಹದಲ್ಲಿ ತಿಳಿಸಿದ್ದಾರೆ.

"ದ್ವಾ ಸಪ್ತತಿಸಹಸ್ರಾಣಿ ನಾಡ್ಯೋಽನ್ಯಾಸ್ತು ಪ್ರಧಾನತಃ ।
ಬೃಹತೀಸಹಸ್ರಸ್ಪರ್ಶಾನಾಮೃಚಾಂ ವಾಚ್ಯೋಽತ್ರ ಕೇಶವಃ ॥" ಎಂಬುದಾಗಿ.

**ಋಕ್‌ಸಹಸ್ರಂ ಯದಸ್ಮಿನ್ ವೈ ಪುಂರೂಪಾಣಿ ಹರೇಃ ಸದಾ ।**
**ಸಷಟ್‌ತ್ರಿಂಶತ್ ಸಹಸ್ರೈಸ್ತು ವರ್ಣೈರುಕ್ತಾನಿ ವೈ** ★

ಸಾವಿರ ಬೃಹತೀಮಂತ್ರದ (ಋಕ್ಕುಗಳ) ಒಟ್ಟು ಅಕ್ಷರ ಸಂಖ್ಯೆ 36 ಸಾವಿರ. ಇವು ಭಗವಂತನ ಪುರುಷರೂಪಗಳನ್ನು ತಿಳಿಸುತ್ತವೆ.

**ನೃಣಾಂ**★ **॥ 45 ॥**

**ಆಯುಷೋಽಹರ್ನಿರ್ಣಯತ್ವೇನ ಪರತ್ವೇನ ಶಿರಸ್ಸು ಚ ।**
**ದಕ್ಷಿಣಾಸ್ತಾಸು ವರ್ತಂತೇ ತಾದೃಗ್ವರ್ಣೈಃ ಸ್ವರಾದಿಭಿಃ ॥ 46 ॥**

ಮನುಷ್ಯರ ಆಯುಷ್ಯದ ಹಗಲಿಗೆ ನಿಯಾಮಕವಾದ ಶ್ರೇಷ್ಠವಾದ ಬೃಹತೀ-ಸಹಸ್ರದ ಆಯಾ ವರ್ಣಗಳಿಂದ ಸ್ವರಾದಿಗಳಿಂದ ಪ್ರತಿಪಾದ್ಯವಾದ ರೂಪಗಳು (ದೇಹದ) ಶಿರಸ್ಸಿನ ಬಲಭಾಗದ ನಾಡಿಗಳಲ್ಲಿ ಇರುತ್ತವೆ.

---

★ ಅನ್ವಯಾನುಸಾರ ಅರ್ಥ ಸುಲಭವಾಗಲು ಶ್ಲೋಕಗಳನ್ನು ವಿಭಜಿಸಲಾಗಿದೆ.

**ಪ್ರತಿಪಾದ್ಯಾನಿ ವೈ ವಿಷ್ಣೋಃ ಸ್ತ್ರೀರೂಪಾಣಿ ಶಿರಸ್ಸು ಚ ।**
**ರಾತ್ರಿ ಯಂತೃತಯಾ ಸಂತಿ ವಾಮಭಾಗಗತಾಸು ಚ ॥ 47 ॥**

ಮನುಷ್ಯನ ಆಯುಷ್ಯದ ರಾತ್ರಿಗೆ ನಿಯಾಮಕವಾದ ಬೃಹತೀಸಹಸ್ರದ ಸ್ವರಾಕ್ಷರಪ್ರತಿಪಾದ್ಯವಾದ ವಿಷ್ಣುವಿನ ಸ್ತ್ರೀ ರೂಪಗಳು ಶಿರಸ್ಸಿನ ಎಡಭಾಗದಲ್ಲಿ ಇರುತ್ತವೆ.

**ಉತ್ತಮಾಂಗಂ ಸಮಾರಭ್ಯ ದ್ವಾದಶಾಂಗುಲಿದೇಶಕೇ ।**
**ಮೋಕ್ಷದಾತಾ ತುರೀಯಾಖ್ಯೋ ವಾಸುದೇವೋಽಸ್ತಿತತ್ರ ಹಿ ॥ 48 ॥**

ಶಿರಸ್ಸಿನಿಂದ ಪ್ರಾರಂಭಿಸಿ ಹನ್ನೆರಡು ಅಂಗುಲದೇಶದಲ್ಲಿ ಮೋಕ್ಷಪ್ರದಾತನಾದ ತುರೀಯನಾದ (ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ) ವಾಸುದೇವ-ರೂಪೀ ಭಗವಂತನು ಇರುತ್ತಾನೆ.

ವಿವರಣೆ- ಈ ವಿಷಯವನ್ನು ''ವಿಷ್ಣುಸ್ತುರೀಯರೂಪೇಣ'' ಎಂದು ಆಚಾರ್ಯರು ಮಂಡೂಕಭಾಷ್ಯದಲ್ಲಿ ಹೇಳಿದ್ದಾರೆ. ಆದರೆ ಈ ವಾಕ್ಯಕ್ಕೆ ಅರ್ಥಾಂತರವನ್ನು ಶ್ರೀನಿವಾಸತೀರ್ಥೀಯ ಟಿಪ್ಪಣಿಯಲ್ಲಿ, ಹಾಗೂ ತಂತ್ರಸಾರ, 4-153ರ ಛಲಾರೀ ಟಿಪ್ಪಣಿಯಲ್ಲಿ ಮಾಡಲಾಗಿದೆ. ಇದು ವಿಚಾರಣೀಯ.

**ಸೋಽಪಿ ಪಶ್ಯತಿ ಸರ್ವೇಷಾಂ ಸರ್ವವ್ಯಾಪಿನಮಂಜಸಾ ।**
**ಆತ್ಮನಾಮಾ ಹೃದಿ ಬ್ರಹ್ಮಶಿಖಾಯಾಂ ಸಂಸ್ಥಿತಃ ಸದಾ ॥ 49 ॥**

ಆ ವಾಸುದೇವರೂಪೀ ಭಗವಂತನು ಎಲ್ಲರನ್ನೂ, ಎಲ್ಲವನ್ನು ಸ್ಪಷ್ಟವಾಗಿ ವಾಸ್ತವಾಗಿ ನೋಡುತ್ತಾನೆ. ಅವನು ಹೃದಯದ ಕೊನೆಯಲ್ಲಿ ಆತ್ಮ ಎಂಬ ಹೆಸರಿನಿಂದ ಯಾವಾಗಲೂ ಇರುತ್ತಾನೆ.

**ಪ್ರದ್ಯುಮ್ನಃ ಕೇಶಗಃ ಪ್ರೋಕ್ತಃ ಲಲಾಟೇ ಕೇಶವಸ್ತಥಾ ।**
**ರುದ್ರಸ್ತದಭಿಮಾನಿತ್ವಾದ್ ರುದ್ರೋಽಪ್ಯತ್ರ ಲಲಾಟಗಃ ॥ 50 ॥**

ಪ್ರದ್ಯುಮ್ನರೂಪೀ ಭಗವಂತನು ಕೂದಲಿನಲ್ಲಿ, ಲಲಾಟ (ಹಣೆಯಲ್ಲಿ) ದಲ್ಲಿ ಕೇಶವನು, ರುದ್ರನು ಅದಕ್ಕೆ ಅಭಿಮಾನಿಯಾದ್ದರಿಂದ ರುದ್ರನು ಕೂಡ ಹಣೆಯಲ್ಲಿ ಇರುತ್ತಾನೆ.

**ಹರಿರ್ದಕ್ಷಿಣನೇತ್ರೇ ತು ಸ್ತಂಭರೂಪೇಣ ವರ್ತತೇ ।**
**ರಮಾ ದಾಮಸ್ವರೂಪೇಣ ವತ್ಸರೂಪೇಣ ಮಾರುತಃ ॥ 51 ॥**

ಶ್ರೀಹರಿಯು ಬಲಗಣ್ಣಿನಲ್ಲಿ ಸ್ತಂಭರೂಪದಿಂದ ಇರುತ್ತಾನೆ. ಲಕ್ಷ್ಮೀದೇವಿಯು ಹಗ್ಗದ ಸ್ವರೂಪದಿಂದ, ಮಾರುತಿಯು (ವಾಯುದೇವರು) ಕರುವಿನ ರೂಪದಿಂದ ಇರುತ್ತಾರೆ.

**ಏವಂ ಸ್ಥಿತಂ ಮಹಾವಾಯುಂ ಅರ್ಚಯಂತಿ ಸುರಾಃ ಸದಾ ।**
**ನೇತ್ರಸ್ಥರಕ್ತರೇಖಾಯಾಂ ಗೌತಮಾಖ್ಯೋಽಸ್ತಿ ಶಂಕರಃ ॥52॥**

ಹೀಗೆ ಇರುವ ಮಹಾವಾಯುದೇವರನ್ನು ದೇವತೆಗಳು ಯಾವಾಗಲೂ ಪೂಜಿಸುತ್ತಾರೆ. ಕಣ್ಣಿನಲ್ಲಿರುವ ಕೆಂಪುರೇಖೆಯಲ್ಲಿ ಗೌತಮ ಎಂಬ ಹೆಸರಿನ ಶಿವನು ಇರುತ್ತಾನೆ.

**ನೇತ್ರಸ್ಥಶುಕ್ಲರೇಖಾಯಾಂ ವಸಿಷ್ಠಾಖ್ಯೋಽಸ್ತಿ ವಾಸವಃ ।**
**ನೇತ್ರಸ್ಥನೀಲರೇಖಾಯಾಂ ವಿಶ್ವಾಮಿತ್ರಾಭಿಧೋ ರವಿಃ ॥53॥**

ಕಣ್ಣಿನಲ್ಲಿರುವ ಬಿಳಿರೇಖೆಯಲ್ಲಿ ವಶಿಷ್ಠ ಎಂಬ ಹೆಸರಿನ ಇಂದ್ರನು ಇರುತ್ತಾನೆ. ಮತ್ತು ಕಣ್ಣಿನಲ್ಲಿರುವ ನೀಲಿರೇಖೆಯಲ್ಲಿ ವಿಶ್ವಾಮಿತ್ರ ಹೆಸರಿನ ಸೂರ್ಯನು ಇರುತ್ತಾನೆ.

**ಉದಕಾಗಮನಸ್ಥಾನೇ ಭಾರದ್ವಾಜಾಭಿದೋಽಸ್ತಿ ಹಿ ।**
**ಪರ್ಜನ್ಯಸ್ತೂರ್ಧ್ವಪಕ್ಷಸ್ಥೋ ಹ್ಯತ್ರಿನಾಮಾ ದ್ಯುದೇವತಾ ॥54॥**

ಕಣ್ಣಿನಲ್ಲಿ ನೀರು ಬರುವ ಸ್ಥಾನದಲ್ಲಿ ಭಾರದ್ವಾಜ ಹೆಸರಿನ ಪರ್ಜನ್ಯನು ಇರುತ್ತಾನೆ. ಇದರ ಮೇಲ್ಭಾಗದಲ್ಲಿ ಅತ್ರಿಹೆಸರಿನ ದ್ಯುನಾಮಕ ದೇವತೆಯು ಇರುತ್ತಾನೆ.

**ಕಶ್ಯಪಾಖ್ಯಾ ಚ ಪೃಥಿವೀ ಹ್ಯಧಃ ಪಕ್ಷ್ಮಸು ಸಂಸ್ಥಿತಾ ।**
**ದಕ್ಷಿಣಾಕ್ಷಿಮುಖೇ ವಿಶ್ವಃ ಜ್ಯೋತಿಸ್ಥಃ ಕಪಿಲೋ ಹರಿಃ ॥55॥**

ಪೃಥ್ವಿಯ ಕೆಳಭಾಗದ ಪಕ್ಕಗಳಲ್ಲಿ ಕಶ್ಯಪ ಹೆಸರಿನ ದೇವತೆಯು ಇರುತ್ತಾನೆ. ಬಲಗಣ್ಣಿನಲ್ಲಿ ವಿಶ್ವರೂಪೀ ಭಗವಂತನು, ಪ್ರಕಾಶದಲ್ಲಿ ಕಪಿಲನಾಮಕ ಶ್ರೀಹರಿಯು ಇರುತ್ತಾನೆ.

ವಿವರಣೆ- ''ದಕ್ಷಿಣಾಕ್ಷಿಮುಖೇ ವಿಶ್ವಃ'' ಎಂಬ ಮಂಡೂಕೋಪನಿಷತ್ತಿನ ಮಾತನ್ನು ಇಲ್ಲಿ ಸ್ಮರಿಸಬೇಕು.

**ಏಕೋನವಿಂಶತಿಮುಖಶ್ಚತುರ್ಹಸ್ತೋ ದ್ವಿಪಾದಕಃ ।**
**ಮಧ್ಯಮಂ ತು ಗಜಾಕಾರಂ ಮುಖಂ ಜಾಗ್ರತ್ಪ್ರವರ್ತಕಃ ॥56॥**

ವಿಶ್ವರೂಪೀ ಭಗವಂತನಿಗೆ ಹತ್ತೊಂಭತ್ತು ಮುಖಗಳಿದ್ದು, ನಾಲ್ಕು ಕೈಗಳು, ಎರಡು ಕಾಲುಗಳು ಇರುತ್ತವೆ. ಹತ್ತೊಂಭತ್ತು ಮುಖಗಳಲ್ಲಿ ಮಧ್ಯದ ಮುಖವು ಗಜಾಕಾರವಿದೆ. ಇವನು ಜಾಗ್ರದವಸ್ಥೆಗೆ ಪ್ರವರ್ತಕನಾಗಿದ್ದಾನೆ.

ವಿವರಣೆ- ವೈಶ್ವಾನರೋ ಜಾಗರಿತಸ್ಥಾನಗೋ ಗಜವಕ್ತ್ರಕಃ । ಎಂಬುದಾಗಿ ಮಂಡೂಕ ಉಪನಿಷದ್ ಭಾಷ್ಯದಲ್ಲಿ ಶ್ರೀಮಧ್ವರು ತಿಳಿಸಿದ್ದಾರೆ.

ವಿಶೇಷ ವಿವರಣೆ – 51 ನೇ ಶ್ಲೋಕದಿಂದ 56 ರವರೆಗೆ ಹೇಳಿದ ವಿಷಯವನ್ನು ಮಾನಸ ಸ್ಮೃತಿಯಲ್ಲಿ ತಿಳಿಸಿದ್ದಾರೆ –

ದಕ್ಷಿಣಾಕ್ಷಿ ಸ್ಥಿತೋ ವಿಷ್ಣುಃ ಸ್ತಂಭರೂಪಾ ರಮಾ ಸ್ವಯಂ ।
ರಜ್ಜುರೂಪಾ ತಯಾ ಬದ್ಧಂ ವಾಯುಂ ಗೋವತ್ಸರೂಪಿಣಂ ॥
ಶ್ವೇತತಾರಾಸ್ಥಿತಶ್ಚೇಂದ್ರೋ ವಸಿಷ್ಠಾಖ್ಯಸ್ಸುರೇಶ್ವರಃ ।
ನಯನೇ ರಕ್ತರಾಜಿಸ್ಥೋ ರುದ್ರೋ ಗೌತಮನಾಮಕಃ ॥
ಕೃಷ್ಣತಾರಾಸ್ಥಿತೋ ವಹ್ನಿಃ ಜಮದಗ್ನಿರಿತಿ ಸ್ಮೃತಃ ।
ಕನೀನಿಕಾದಿತ್ಯಸಂಸ್ಥೋ ವಿಶ್ವಾಮಿತ್ರಾಭಿದಃ ಸ್ಮೃತಃ ॥
ವಾರಿಗೋ ವರುಣಃ ಸಾಕ್ಷಾತ್ ಭಾರದ್ವಾಜಾಭಿಧಸ್ತಥಾ ।
ಅಧರಾವರ್ತಿನೀ ಸಂಸ್ಥಾ ಪೃಥಿವೀ ಕಶ್ಯಪನಾಮಿಕಾ ॥

ಶ್ರೀ ಹರಿಕಥಾಮೃತಸಾರದಲ್ಲಿ ಎಲ್ಲ ವಿಷಯಗಳನ್ನು ಮಾತೃಕಾಸಂಧಿಯಲ್ಲಿ ತಿಳಿಸಿರುವುದು ಗಮನಾರ್ಹ–

(1) ಸ್ತಂಭರೂಪದಲಿಪ್ಪ ದಕ್ಷಿಣ
ವಂಬಕದಿ ಪ್ರದ್ಯುಮ್ನ ಗುಣರೂ
ಪಾಂಭ್ರಣಿಯು ತಾನಾಗಿ ಇಪ್ಪಳು ವತ್ಸರೂಪದಲಿ ।
ಪೊಂಬಸುರ ಪದಯೋಗ್ಯ ಪವನ ತ್ರಿ
ಯಂಬಕಾದಿ ಸಮಸ್ತ ದಿವಿಜ ಕ
ದಂಬ ಸೇವಿತನಾಗಿ ಸರ್ವಪದಾರ್ಥಗಳ ತೋರ್ಪ॥ (8–9)

(2) ನೇತ್ರಗಳಲಿ ವಶಿಷ್ಠವಿಶ್ವಾ
ಮಿತ್ರ ಭಾರದ್ವಾಜ ಗೌತಮ
ನತ್ರಿಯಾ ಜಮದಗ್ನಿನಾಮಗಳಿಂದ ಕರೆಸುತಲಿ ।
ಪತ್ರತಾಪಕ ಶಕ್ರ ಸೂರ್ಯ ಧ
ರಿತ್ರಿ ಪರ್ಜನ್ಯಾದಿ ಸುರರು ಜ
ಗತ್ರಯೇಶನ ಭಜಿಪರನುದಿನ ಪರಮಭಕುತಿಯಲಿ ॥(8–10)

(3) ಜ್ಯೋತಿಯೊಳಗಿಪ್ಪನು ಕಪಿಲಪುರು
ಹೂತ ಮುಖ ದಿಕ್ಪತಿಗಳಿಂದ ಸ
ಸಮೇತನಾಗಿಹ ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ।
ಶ್ವೇತವರ್ಣ ಚತುರ್ಭುಜನು ಸಂ
ಪ್ರೀತಿಯಿಂದಲಿ ಸ್ಥೂಲವಿಷಯವ
ಚೇತನರಿಗುಂಡುಣಿಪ ಜಾಗ್ರತೆಯಿತ್ತು ನೃಗಜಾಸ್ಯ ॥(8-11)

**ಜಾಗ್ರತ್‌ಪದಾರ್ಥಗರಸಾನ್ ಶುಭಾನ್ ಭುಂಕ್ತೇ ನಚಾಶುಭಾನ್ ।**
**ಅಷ್ಟದಿಕ್ಪಾಲಕಾಃ ಸಂತಿ ಪರಿತಸ್ತಸ್ಯ ಸರ್ವದಾ ॥ 57 ॥**

ಜಾಗ್ರದವಸ್ಥಾ ನಿಯಾಮಕನಾದ ವಿಶ್ವರೂಪೀ ಭಗವಂತನು ಪದಾರ್ಥಗಳಲ್ಲಿರುವ ಶುಭರಸಗಳನ್ನು ಮಾತ್ರ ಸ್ವೀಕರಿಸುತ್ತಾನೆ. ಅಶುಭವನ್ನು ಸ್ವೀಕರಿಸುವುದಿಲ್ಲ. ಈ ಭಗವಂತನ ಸುತ್ತಲೂ ಅಷ್ಟದಿಕ್ಪಾಲಕರು ಯಾವಾಗಲೂ ಇರುತ್ತಾರೆ.

ವಿವರಣೆ- ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ ॥- ಇತ್ಯಾದಿ ಸೂತ್ರಭಾಷ್ಯೋಕ್ತ ಪ್ರಮಾಣಗಳನ್ನು ಇಲ್ಲಿ ಗಮನಿಸಬೇಕು.

**ವಾಮಾಕ್ಷೇ ವಾಮತಃ ಸೂರ್ಯಃ ಚಕ್ಷುರ್ಮಾನೀ ಪ್ರಕೀರ್ತಿತಃ ।**
**ಅಜಾದಿಮೂರ್ತಯಸ್ತತ್ರ ಮಸ್ತಕಾದಿಷು ಸರ್ವದಾ ॥ 58 ॥**
**ವರ್ತಂತೇ ★**

ಜೀವರ ಎಡಗಣ್ಣಿನಲ್ಲಿ ಸೂರ್ಯನು ಇದ್ದು ಕಣ್ಣಿನ ನಿಯಾಮಕ (ಅಭಿಮಾನಿಯೆಂದು)ನೆಂದು ಹೇಳಲ್ಪಡುತ್ತಾನೆ. ಅಜಾದಿ ಭಗವಂತನ ಮೂರ್ತಿಗಳು ಯಾವಾಗಲೂ ಶಿರಸ್ಸಿನಲ್ಲಿ ಇರುತ್ತವೆ.

(ಅಂ-ಅಜಾಯನಮಃ ಎಂದು ಶಿರಸ್ಸಿನಲ್ಲಿ ಸ್ಮರಿಸುವದುಂಟು)

**★ ಶ್ವಾಸಗಃ ಪ್ರಾಣಃ ಉಚ್ಛ್ವಾಸೇ ಭಾರತೀ ಸ್ಮೃತಾ ।**
**ವಿಪ್ರಾಣಾಂ ದಕ್ಷಿಣೇ ಶ್ರೋತ್ರೇ ದೇವಾಸ್ತೀರ್ಥಾಭಿಮಾನಿನಃ ॥59॥**

---

★ ಅನ್ವಯಾನುಸಾರ ಅರ್ಥ ಸುಲಭವಾಗಲು ಶ್ಲೋಕಗಳನ್ನು ವಿಭಜಿಸಲಾಗಿದೆ.

ಶ್ವಾಸದಲ್ಲಿ (ಪ್ರಾಣ) ವಾಯುದೇವರು, ಉಚ್ಛ್ವಾಸದಲ್ಲಿ ಭಾರತೀದೇವಿಯರು ಇರುವರೆಂದು ತಿಳಿಯಬೇಕು. ಬ್ರಾಹ್ಮಣರ ಬಲಗಿವಿಯಲ್ಲಿ ಎಲ್ಲ ದೇವತೆಗಳು ಹಾಗೂ ತೀರ್ಥಾಭಿಮಾನಿಗಳೂ ಇರುತ್ತಾರೆ.

ವಿವರಣೆ - ಶ್ರೀಹರಿಕಥಾಮೃತಸಾರದಲ್ಲಿ ದಿಗ್ದೇವತೆಗಳು, ತೀರ್ಥಾಭಿಮಾನಿ ದೇವತೆಗಳು ಕಿವಿಯಲ್ಲಿ ಇರುವರೆಂದು ಹೇಳಿದ್ದಾರೆ.

ನೆಲೆಸಿಹರು ದಿಗ್ದೇವತೆಗಳಿ
ಕ್ಕೆಲದ ಕರ್ಣಂಗಳಲಿ ತೀರ್ಥಂ
ಗಳಿಗೆ ಮಾನಿಗಳಾದ ಸುರನದಿಮುಖ್ಯ ನಿರ್ಜರರು ।
ಬಲದ ಕಿವಿಯಲಿ ಇರುತಿಹರು ಬಾಂ
ಬೊಳೆಯ ಜನಕ ತ್ರಿವಿಕ್ರಮನು ನಿ
ರ್ಮಲರನು ಮಾಡುವನು ಈ ಪರಿ ಚಿಂತಿಸುವ ಜನರ ॥(8-12)

ಹಾಗೂ -"ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।
ವಿಪ್ರಸ್ಯ ದಕ್ಷಿಣೇ ಕರ್ಣೇ ಸಂತೀತಿ ಮನುರಬ್ರವೀತ್"
ಎಂದು ಪರಾಶರವಚನ.

**ಭಾಗೀರಥ್ಯಾದಿ ತೀರ್ಥಾನಿ ವರ್ತಂತೇಽತ್ರ ತ್ರಿವಿಕ್ರಮಃ ।**
**ತ್ರಿವಿಕ್ರಮಶ್ಚ ಮಧುಹಾ ಗಂಡಸ್ಥಳಗತಾವುಭೌ ॥60॥**

ಭಾಗೀರಥಿಯೇ ಮೊದಲಾದ ತೀರ್ಥಗಳು ಮತ್ತು ಗಂಗಾಜನಕನಾದ ತ್ರಿವಿಕ್ರಮರೂಪೀ ಭಗವಂತನು (ಇಲ್ಲಿ) ಬಲಗಿವಿಯಲ್ಲಿ ಇರುತ್ತಾರೆ. ಮಧುನಾಮಕ ದೈತ್ಯನನ್ನು ಸಂಹಾರ ಮಾಡಿದ ಮಧುಸೂದನ ಹಾಗೂ ಈ ತ್ರಿವಿಕ್ರಮರೂಪೀ ಭಗವಂತನು ಇವರಿಬ್ಬರೂ ಎರಡೂ ಕೆನ್ನೆಗಳ ಸ್ಥಾನದಲ್ಲಿ ಇರುತ್ತಾರೆ.

**ವಾಮನಃ ಶ್ರೀಧರಶ್ಚೋಭಾವೋಷ್ಠಗೌ ದಂತಪಂಕ್ತಿಗೌ ।**
**ಓಜೋಭೃತಶ್ಚೌರಸಶ್ಚ ಜಿಹ್ವಾಸ್ಥಾವಥ ಮತ್ಸ್ಯಗೌ ॥61॥**

ಭಗವಂತನ ವಾಮನ ಮತ್ತು ಶ್ರೀಧರ ರೂಪಗಳು ತುಟಿಗಳಲ್ಲಿ ಮತ್ತು ಮೇಲಿನ, ಕೆಳಗಿನ ದಂತ ಪಂಕ್ತಿ (ಹಲ್ಲಿನ ಸಾಲು)ಗಳಲ್ಲಿ ಓಜೋಭೃತ್, ಔರಸ ಎಂಬ ಭಗವಂತನ ರೂಪಗಳು ಇರುತ್ತವೆ. ನಾಲಿಗೆಯಲ್ಲಿ ಮತ್ಸ್ಯರೂಪವಿರುತ್ತದೆ.

**ವಾಗಿಂದ್ರಿಯಸ್ಥಾವನಲ ಭಾರ್ಗವೌ ವಾಕ್ಯಸಂಸ್ಥಿತೌ ।**
**ಸರಸ್ವತ್ಯಭಿದೋ ವಿಷ್ಣುಃ ತತ್ಸ್ನುಷಾ ಚ ಸರಸ್ವತೀ ॥62॥**

ವಾಗಿಂದ್ರಿಯ (ಮುಖ) ದಲ್ಲಿ ಅಗ್ನಿದೇವರು ಹಾಗೂ ಪರಶುರಾಮ ರೂಪೀ ಭಗವಂತ ಇರುತ್ತಾನೆ. ವಾಕ್‌ನಲ್ಲಿ ಸರಸ್ವತೀ ಎಂಬ ಹೆಸರಿನ ವಿಷ್ಣು ಹಾಗೂ ಅವನ ಸೊಸೆ ಸರಸ್ವತಿ ಇರುತ್ತಾರೆ.

ವಿವರಣೆ- ಋಗ್ಭಾಷ್ಯದಲ್ಲಿ ಸರಸ್ವತೀ ಎಂದು ದೇವರನ್ನು, ಪಾವಕಾನಃ ಸರಸ್ವತೀ ಎಂಬ ಮಂತ್ರದಲ್ಲಿ ಕರೆಯಲಾಗಿದೆ.

**ಇಂದ್ರನಾಮೋಪಜಿಹ್ವಾಯಾಂ ಕಕುದ್ದಾಮೋದರಃ ಸ್ಮೃತಃ ।**
**ಉದಾನೇ ತೈಜಸೋ ಕಂಠೇ ವಿಶ್ವಾಕಾರೋಽಸ್ತಿ ತೈಜಸಃ ॥63॥**

ಕಿರುನಾಲಿಗೆಯಲ್ಲಿ ಇಂದ್ರ, ಹೆಗಲಿನಲ್ಲಿ ದಾಮೋದರ ರೂಪಿ ಭಗವಂತ ಇರುತ್ತಾನೆ. ಕಂಠದಲ್ಲಿ ಉದಾನರೂಪೀ ಪ್ರಾಣದೇವರು, ಅಲ್ಲಿ ತೈಜಸರೂಪೀಭಗವಂತ ವಿಶ್ವಾಕಾರನಾಗಿ ಇರುತ್ತಾನೆ.

**ಮನೋಬುದ್ಧಿರಹಂಕಾರಶ್ಚಿತ್ತಂ ಚೇತನಮಿತ್ಯಪಿ ।**
**ಮನಸೋ ವೃತ್ತಯಸ್ತ್ವೇತೇ ಮನಸೀಂದ್ರಮನೋಭವೌ ॥64॥**

ಮನಸ್ಸು ಬುದ್ಧಿ, ಅಹಂಕಾರ, ಚಿತ್ತ, ಚೇತನ ಇವೆಲ್ಲವೂ ಮನಸ್ಸಿನ ವೃತ್ತಿಗಳು ಎಂದು ಹೇಳಲ್ಪಟ್ಟಿವೆ. ಮನಸ್ಸಿನಲ್ಲಿ ಇಂದ್ರ, ಕಾಮರು ಇರುತ್ತಾರೆ.

**ಬುದ್ಧೌ ಉಮಾಹಂಕೃತೌ ಚ ರುದ್ರಶ್ಚಿತ್ತೇ ಖಗೇಶ್ವರಃ ।**
**ಶೇಷೋಽಸ್ತಿ ಚೇತನಸ್ಸರ್ವಮನೋವೃತ್ತೀಃ ಪ್ರವರ್ತಯನ್ ॥65॥**

ಬುದ್ಧಿ ತತ್ವದಲ್ಲಿ ಉಮಾದೇವಿ, ಅಹಂಕಾರತತ್ವದಲ್ಲಿ ರುದ್ರದೇವರು, ಚಿತ್ತದಲ್ಲಿ ಗರುಡದೇವರು, ಚೇತನದಲ್ಲಿ ಶೇಷದೇವರು ಇದ್ದು ಎಲ್ಲ ಜೀವರ ಮನೋವೃತ್ತಿಗಳನ್ನು ಪ್ರವರ್ತಿಸುತ್ತಾರೆ.

ವಿವರಣೆ- ಮೇಲಿನ 2 ಶ್ಲೋಕಗಳ ತಾತ್ಪರ್ಯವನ್ನು ಶ್ರೀಹರಿಕಥಾಮೃತಸಾರದಲ್ಲಿ ತಿಳಿಸಿದ್ದಾರೆ.

ಚಿತ್ತಜೇಂದ್ರರು ಮನದೊಳಿಪ್ಪರು
ಕೃತ್ತಿವಾಸನು ಅಹಂಕಾರದಿ
ಚಿತ್ತಚೇತನಮಾನಿಗಳು ವಿಹಗೇಂದ್ರ ಫಣಿಪರೊಳು ॥

ಮಾತೃಕಾಸಂಧಿ (8-13)

**ತೈಜಸಃ ಸ್ವಪ್ನನಿರ್ಮಾತಾ ಸರ್ವಜೀವಸುಖಪ್ರದಃ ।**
**ಹೃದಯೇ ಪ್ರಾಜ್ಞನಾಮಾ ऽಸ್ತಿ ಸರ್ವಜೀವ ಸುಷುಪ್ತಿದಃ ॥66॥**

ತೈಜಸರೂಪೀ ಭಗವಂತನು ಸ್ವಪ್ನವೆಂಬ ಅವಸ್ಥೆಯನ್ನು ನಿರ್ಮಿಸಿ ಎಲ್ಲ ಜೀವರಿಗೆ ಸುಖವನ್ನು ತಂದು ಕೊಡುತ್ತಾನೆ. ಜೀವರ ಹೃದಯದಲ್ಲಿ ಪ್ರಾಜ್ಞನಾಮಕ ಭಗವಂತನು ಇದ್ದು ಎಲ್ಲ ಜೀವರಿಗೆ ಸುಷುಪ್ತಿಅವಸ್ಥೆಯನ್ನು ತಂದುಕೊಡುತ್ತಾನೆ. ಅಂದರೆ ಜೀವರು ನಿದ್ರಾವಸ್ಥೆಯನ್ನು ಹೊಂದುತ್ತಾರೆ.

ಇದನ್ನು ಹರಿಕಥಾಮೃತಸಾರದಲ್ಲಿ ಹೀಗೆ ವರ್ಣಿಸಿದ್ದಾರೆ –
ಜ್ಞಾನಮಯ ತೈಜಸನು ಹೃದಯ
ಸ್ಥಾನವೈದಿಸಿ ಪ್ರಾಜ್ಞನೆಂಬಭಿ
ಧಾನದಿಂ ಕರೆಸುತ್ತ ಚಿತ್ಸುಖವ್ಯಕ್ತಿಯನು ಕೊಡುತ।
ಆನತೇಷ್ಟಪ್ರದನು ಅನುಸಂ
ಧಾನ ವೀಯದೆ ಸುಪ್ತಿಯೈದಿಸಿ
ತಾನೆ ಪುನರಪಿ ಸ್ವಪ್ನಜಾಗ್ರತೆಯೀವ ಚೇತನಕೆ ॥14॥
(ಮಾತೃಕಾಸಂಧಿ 8–14)

**ಬಿಂಬಮೂರ್ತಿಃ ಸುಷುಪ್ತೌ ಚ ಜೀವಸ್ಯೋತ್ಕ್ರಮಣಾದನು ।**
**ಪ್ರಾಜ್ಞನಾಮಾ ಸಮಾಯಾತಿ ತತಃ ಪ್ರಾಜ್ಞಂ ಚ ತಂ ವಿದುಃ ॥67॥**

ಬಿಂಬರೂಪಿಯಾದ ಭಗವಂತನು ಜೀವರಿಗೆ ಸುಷುಪ್ತಿ ಅವಸ್ಥೆಯನ್ನು ತಂದುಕೊಡುತ್ತಾನೆ. ಜೀವನ ಉತ್ಕ್ರಾಂತಿ ಕಾಲದಲ್ಲಿ (ಶರೀರದಿಂದ ಹೊರಗೆ ಹೊರಡುವ ಕಾಲದಲ್ಲಿ) ಪ್ರಾಜ್ಞನಾಮಕಭಗವಂತನಿಂದ ಯುಕ್ತನಾಗಿ ಹೃದಯದಿಂದ ಹೊರಟುಹೋಗುತ್ತಾನೆ. ಈ ಭಗವಂತನರೂಪಕ್ಕೆ "ಪ್ರಾಜ್ಞ" ಎಂದು ಕರೆಯುತ್ತಾರೆ.

ವಿವರಣೆ– "ಪ್ರಾಜ್ಞೇನ ಆತ್ಮನಾ ಅನ್ವಾರೂಢಃ ಉತ್ಸರ್ಜನ್ಯಾತಿ" ಎಂಬ ಭಾಷ್ಯೋಕ್ತ ಪ್ರಮಾಣ ವಚನವನ್ನು ಇಲ್ಲಿ ಸ್ಮರಿಸಬಹುದು.

**ದಕ್ಷಿಣಾಕ್ಷಿಮುಖೇ ಸಂಸ್ಥೋ ವಿಶ್ವೋ ಜೀವಪ್ರಕಾಶಕಾನ್ ।**
**ಆದಾಯೈಕ್ಯಂ ಯದಾ ಯಾತಿ ತೈಜಸೇನ ಶರೀರಿಣಾಂ ॥68॥**

**ಸ್ವಪ್ನಾವಸ್ಥಾ ಸಮುದ್ದಿಷ್ಟಾ** ★

---

★ ಅನ್ವಯಾನುಸಾರ ಅರ್ಥ ಸುಲಭವಾಗಲು ಶ್ಲೋಕಗಳನ್ನು ವಿಭಜಿಸಲಾಗಿದೆ.

ಬಲಗಣ್ಣಿನ ಮುಂಭಾಗದಲ್ಲಿರುವ ವಿಶ್ವರೂಪೀ ಭಗವಂತನು ಜೀವನನ್ನು ಸಮೀಪಿಸಿ ಅವನ ಪ್ರಕಾಶವನ್ನು ತೆಗೆದುಕೊಂಡು ತೈಜಸರೂಪದ ಬಳಿಗೆ ಕಂಠ – ದೇಶದಲ್ಲಿಯಾವಾಗ ಬರುವನೋ ಅದಕ್ಕೆ ಸ್ವಪ್ನಾವಸ್ಥೆಯೆಂದು ಹೇಳುವುದುಂಟು.

**★ ಜೀವಾದೃಷ್ಟಾನುಸಾರತಃ ।**
**ವಾಸನಾಮಯ ವಸ್ತೂನಿ ಸೃಜತ್ಯಾದಾಯ ತೈಜಸಃ ॥69॥**

**ಜೀವಪ್ರಕಾಶಮಾದಾಯ ತೈಜಸೋ ವಿಶ್ವಸಂಯುತಃ ।**
**ಪ್ರಾಜ್ಞೇನೈಕ್ಯಂ ಯದಾ ಯಾತಿ ಸುಷುಪ್ತಿಃ ಪ್ರಾಣಿನಾಂ ಸದಾ ॥70॥**

ತೈಜಸನು ಜೀವನ ಅದೃಷ್ಟಕ್ಕೆ ಅನುಗುಣವಾಗಿ ವಾಸನಾಮಯ ವಸ್ತುಗಳನ್ನು ತೆಗೆದುಕೊಂಡು ಕರಿತುರಗಾದಿ ಸ್ವಪ್ನಪದಾರ್ಥಗಳನ್ನು ಸೃಷ್ಟಿಸುತ್ತಾನೆ. ತೈಜಸರೂಪೀ ಭಗವಂತನು ವಿಶ್ವನಿಂದ ಕೂಡಿ ಪ್ರಾಜ್ಞನಿಂದ ಯಾವಾಗ ಐಕ್ಯವನ್ನು ಹೊಂದುವನೋ ಆಗ ಜೀವರಿಗೆ ಸುಷುಪ್ತಿ ಅವಸ್ಥೆ ಬರುತ್ತದೆ.

ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ ಸೂತ್ರದಲ್ಲಿ ಇದನ್ನು ತಿಳಿಸಿದ್ದಾರೆ.

**ಗಿಲಿತ್ವಾ ಜೀವಮಾಸ್ಯೇನ ಮುಖ್ಯಪ್ರಾಣಮುಪಾಗತಂ ।**
**ರಮಾ ನಿವೇಶ್ಯ ಜಠರೇ ಪ್ರಾಜ್ಞಮಾಲಿಂಗತೇ ಪತಿಂ ॥71॥**

ಲಕ್ಷ್ಮೀದೇವಿಯರು ಮುಖದಿಂದ ಜೀವನನ್ನು ನುಂಗಿ, ಬಂದಿರುವ ಮುಖ್ಯಪ್ರಾಣನನ್ನು ಜಠರದಲ್ಲಿ ಇಟ್ಟು ತಮ್ಮ ಪತಿಯಾದ ಪ್ರಾಜ್ಞನಾಮಕ ಭಗವಂತನನ್ನು ಆಲಿಂಗನ ಮಾಡಿಕೊಳ್ಳುತ್ತಾರೆ.

**ಜೀವಸ್ವರೂಪಾನಂದಸ್ಯ ಪ್ರಾಜ್ಞೋವ್ಯಕ್ತೀಕರಿಷ್ಯತಿ ।**
**ಇಯಂ ಸುಷುಪ್ತಿರ್ವಿಜ್ಞೇಯಾ ಸರ್ವಕ್ಲೇಶವಿನಾಶಿನೀ ॥72॥**

ಪ್ರಾಜ್ಞನಾಮಕ ಭಗವಂತನು ಜೀವನ ಸ್ವರೂಪಾನಂದವನ್ನು ವ್ಯಕ್ತಗೊಳಿಸುತ್ತಾನೆ. ಇದನ್ನೇ ಸುಷುಪ್ತಿ ಎಂದು ಕರೆಯುತ್ತಾರೆ. ಇದು ಎಲ್ಲ ದುಃಖಗಳನ್ನು ನಾಶಮಾಡುತ್ತದೆ.

**ಸೃಜತ್ಯನಿತ್ಯಸೌಖ್ಯಂತು ಸ್ವಸಂಗಾತ್ತಾಮಸೇಷ್ವಜಃ ।**
**ಸೃತಿಯೋಗ್ಯಸ್ವರೂಪಸ್ಯ ಸುಖದುಃಖಾತ್ಮಕತ್ವತಃ ॥73॥**

---

★ ಅನ್ವಯಾನುಸಾರ ಅರ್ಥ ಸುಲಭವಾಗಲು ಶ್ಲೋಕಗಳನ್ನು ವಿಭಜಿಸಲಾಗಿದೆ.

ಭಗವಂತನು ತಾಮಸಜೀವರಲ್ಲಿ ತಾನಿದ್ದು ತನ್ನ ಸಂಗದಿಂದ ಅವರಲ್ಲಿ ಅನಿತ್ಯ-ಸುಖವನ್ನು ಸೃಷ್ಟಿಮಾಡುತ್ತಾನೆ. ಸಂಸಾರಯೋಗ್ಯರ ಸ್ವರೂಪವು ಸುಖದುಃಖಾತ್ಮಕ-ವಾಗಿರುತ್ತದೆ.

**ಈಶೇಶೋ ವಸತೇಸ್ತತ್ರ ಸುಖಮಾತ್ರಂ ಪ್ರತೀಯತೇ ।**
**ಪುನರ್ಜಾಗ್ರತ್ಪುನಃ ಸ್ವಪ್ನಃ ಸ್ವಸ್ಥಾನಗತಯೋರ್ಭವೇತ್ ॥74॥**

ರುದ್ರದೇವರಿಗೆ ಅಧಿಪತಿಯಾದ ಪ್ರಾಜ್ಞನಾಮಕ ಭಗವಂತನ ಸನ್ನಿಧಾನದಿಂದ ಸಾತ್ವಿಕರಿಗೆ ಸುಖಮಾತ್ರ ಅನುಭವಕ್ಕೆ ಬರುತ್ತದೆ. ನಂತರ ಸುಷುಪ್ತಿ ಅವಸ್ಥೆಯನ್ನು ದಾಟಿ ಬಂದವರಿಗೆ ಮತ್ತೆ ಜಾಗ್ರತ, ಸ್ವಪ್ನ ಅವಸ್ಥೆಗಳು ಆಗುತ್ತವೆ.

**ಹೃದಯಾಖ್ಯ ಪುರೇ ತಸ್ಮಿನ್ ಸಂತಿ ದ್ವಾರಾಣಿ ಷೋಡಶ ।**
**ಚತುಸ್ಸೃಷ್ವಪಿ ದಿಕ್ಪೂಕ್ತಂ ಪೃಥಕ್ ದ್ವಾರಚತುಷ್ಟಯಂ ॥75॥**

ಹೃದಯವೆಂಬ ಮನೆಯಲ್ಲಿ ಹದಿನಾರು ದ್ವಾರಗಳು ಇರುತ್ತವೆ. ನಾಲ್ಕು ದಿಕ್ಕುಗಳಲ್ಲಿ ಕೂಡ ಮತ್ತೆ ನಾಲ್ಕು ಬೇರೆ ದ್ವಾರಗಳಿವೆಯೆಂದು ಹೇಳಲ್ಪಟ್ಟಿದೆ.

**ಪೂರ್ವದ್ವಾರೇಷು ಪ್ರಥಮೇ ಮಹಾಲಕ್ಷ್ಮೀಃ ಪ್ರಕೀರ್ತಿತಾ ।**
**ದ್ವಿತೀಯೇ ದ್ಯುಪದೋಕ್ತಾಯಾ ಭಾರತೀ ಚ ತೃತೀಯಕೇ ॥76॥**

**ಸೂರ್ಯಃ ಪ್ರಾಣಃ ಚಕ್ಷುರಿತಿ ತ್ರಿರೂಪೀ ವರ್ತತೇ ರವಿಃ ।**
**ಜಯಶ್ಚ ವಿಜಯಶ್ಚೇತಿ ಚರಮದ್ವಾರಗೌ ಸ್ಮೃತೌ ॥77॥**

ಮೊದಲನೆಯ ಪೂರ್ವದ್ವಾರದಲ್ಲಿ ಮಹಾಲಕ್ಷ್ಮೀದೇವಿಯರು ಇರುತ್ತಾರೆ. ಎರಡನೆಯ ದ್ವಾರದಲ್ಲಿ ದ್ಯು ಪದದಿಂದ ಹೇಳಲ್ಪಡುವ ಭಾರತೀದೇವಿಯರು ಇರುತ್ತಾರೆ. ಮೂರನೆಯ ದ್ವಾರದಲ್ಲಿ ಸೂರ್ಯ, ಪ್ರಾಣ, ಚಕ್ಷು ಎಂಬ ಮೂರು ರೂಪಗಳುಳ್ಳ ರವಿಯು ಇರುತ್ತಾನೆ.ನಾಲ್ಕನೆಯ ದ್ವಾರದಲ್ಲಿ ಜಯ, ವಿಜಯರು ಇರುತ್ತಾರೆ.

**ದಕ್ಷಿಣೇ ಪ್ರಥಮೇ ಲಕ್ಷ್ಮೀಃ ದ್ವಿತೀಯೇ ದ್ವಿಪರಾಭಿದಾ ।**
**ಬಲಪ್ರಬಲಸಂಜ್ಞೌ ತೌ ದ್ವಾರಸ್ಥೌ ಚರಮಸ್ಥಿತೌ ॥78॥**

ಇನ್ನು ದಕ್ಷಿಣದ ಮೊದಲ ದ್ವಾರದಲ್ಲಿ ಲಕ್ಷ್ಮೀದೇವಿಯರು, ಎರಡನೆಯ ದ್ವಾರದಲ್ಲಿ ದ್ವಿಪರಾಎಂಬ ಹೆಸರಿನ ಭಾರತೀದೇವಿಯರು, ಕೊನೆಯ ದ್ವಾರಗಳಲ್ಲಿ ಬಲ ಮತ್ತು ಪ್ರಬಲ ಹೆಸರಿನ ದೇವತೆಗಳು ಇರುತ್ತಾರೆ.

**ಪಶ್ಚಿಮೇ ಪ್ರಥಮೇ ಲಕ್ಷ್ಮೀಃ ದ್ವಿತೀಯೇ ಪೃಥಿವೀ ಸ್ಥಿತಾ ।**
**ಇತೀರಿತಾ ಭಾರತೀ ಚ ತೃತೀಯೇಽಗ್ನಿರಪಾನಕಃ ॥79॥**

**ವಾಕ್ಚೇತಿರೂಪತ್ರಿತಯ ಯುಕ್ತಸ್ತತ್ರಾಸ್ತಿಪಾವಕಃ ।**
**ನಂದೇ ಚ ಸುನಂದೇ ಚ ಚತುರ್ಥದ್ವಾರಸಂಸ್ಥಿತೌ ॥80॥**

ಪಶ್ಚಿಮದ ಪ್ರಥಮದ್ವಾರದಲ್ಲಿ ಲಕ್ಷ್ಮೀದೇವಿಯರು, ದ್ವಿತೀಯದ್ವಾರದಲ್ಲಿ ಪೃಥಿವೀ ನಾಮಕಳಾದ ಭಾರತೀ ದೇವಿಯರು ಇರುತ್ತಾರೆ. ಮೂರನೆಯ ದ್ವಾರದಲ್ಲಿ. ವಾಕ್, ಅಗ್ನಿ, ಅಪಾನ,ರೂಪಗಳಿಂದ ಅಗ್ನಿಯು ಇರುತ್ತಾನೆ. ನಂದ ಸುನಂದ ಇವರು ನಾಲ್ಕನೆಯ ದ್ವಾರದಲ್ಲಿ ಇರುತ್ತಾರೆ.

**ಉತ್ತರೇ ಪ್ರಥಮೇ ಲಕ್ಷ್ಮೀಃ ದ್ವಿತೀಯೇ ಭಾರತೀ ಸ್ಮೃತಾ ।**
**ತೃತೀಯೇಂದ್ರಃ ಸಮಾನಶ್ಚ ಮನಶ್ಚೇತಿ ತ್ರಿನಾಮಕಃ ॥81॥**
**ವಾಸವೋಽಪಿ ಚತುರ್ಥೇ ತು ಕುಮುದಃ ಕುಮುದಾಕ್ಷಕಃ ।**

ಉತ್ತರದ ಪ್ರಥಮದ್ವಾರದಲ್ಲಿ ಲಕ್ಷ್ಮೀದೇವಿಯರು, ದ್ವಿತೀಯದ್ವಾರದಲ್ಲಿ ಭಾರತೀದೇವಿ ಇರುತ್ತಾರೆ. ಮೂರನೆಯ ದ್ವಾರದಲ್ಲಿ ಇಂದ್ರ, ಸಮಾನ, ಮನ, ಎಂಬ ಮೂರು ರೂಪಗಳಿಂದ ಇಂದ್ರದೇವರು ಇರುತ್ತಾರೆ. ನಾಲ್ಕನೆಯ ದ್ವಾರದಲ್ಲಿ ಕುಮುದ, ಕುಮುದಾಕ್ಷರು ಇರುತ್ತಾರೆ.

**ಊರ್ಧ್ವದ್ವಾರೇ ಮಹಾಲಕ್ಷ್ಮೀಃ ಆಶಾಖ್ಯಾ ಭಾರತೀಸ್ಮೃತಾ ॥82॥**

**ವಾಯುಶ್ಚೋದಾನ ಸಂಯುಕ್ತೋ ವರ್ತತೇ ತತ್ರ ಯಃ ।**

ಮೇಲಿನ ದ್ವಾರದಲ್ಲಿ ಮಹಾಲಕ್ಷ್ಮೀದೇವಿಯರು, ಆಶಾ ಎಂಬ ಹೆಸರಿನ ಭಾರತೀದೇವಿಯರು ಇರುತ್ತಾರೆ.ಅಲ್ಲಿ ವಾಯುವು ಉದಾನನಿಂದ ಕೂಡಿ ಇರುತ್ತಾನೆ.

**ತತ್ರ ಹೃತ್ಕರ್ಣಿಕಾಮಧ್ಯೇ ಸ್ಥೂಲಾಂಗುಷ್ಠ ಪ್ರಮಾಣತಃ ॥83॥**

**ಬಿಂಬರೂಪ್ಯಸ್ತಿ ತತ್ಪೃಷ್ಠಭಾಗೇ ಪ್ರಾದೇಶಮಾತ್ರಕಃ ।**
**ಪುರುಷಾಖ್ಯೋ ಹರಿಸ್ತತ್ರ ವರ್ತತೇ ಕರ್ಣಿಕಾಂತರೇ ॥84॥**

ಅಲ್ಲಿ ಹೃದಯ ಕಮಲದ ಮಧ್ಯದಲ್ಲಿ ಹೆಬ್ಬಟ್ಟಿನ ಪ್ರಮಾಣದಿಂದ ಬಿಂಬರೂಪಿ ಭಗವಂತ ಇರುತ್ತಾನೆ. ಇದರ ಹಿಂಭಾಗದಲ್ಲಿ ಪ್ರಾದೇಶ ಪರಿಮಿತ (ಚೋಟುಉದ್ದ) ನಾದ ಪುರುಷೋತ್ತಮನಾದ ಶ್ರೀಹರಿಯು ಕರ್ಣಿಕಾಂತರದಲ್ಲಿ ಇರುತ್ತಾನೆ.

**ಅಂಗುಷ್ಠ ಪರಿಮಾಣೇತಃ ಮೂಲೇಶಾಖ್ಯೋಽಸ್ತಿ ವೈ ಹರಿಃ ।**
**ಮುಖ್ಯಪ್ರಾಣೋಽಂಜಲಿಂ ಬಧ್ವಾಮೂಲೇಶಾಂಘ್ರಿಮುಪಾಶ್ರಿತಃ ॥85॥**

**ಮೂಲೇಶಾಖ್ಯಾಭಿಮುಖ್ಯೇನ ವರ್ತತೇ ಜೀವಸಂಯುತಃ ॥**

ಜೀವನ ಅಂಗುಷ್ಠಪರಿಮಾಣದ ರೂಪದಿಂದ ಮೂಲೇಶಾಖ್ಯ ಶ್ರೀಹರಿಯು ಕಮಲಕರ್ಣಿಕೆ ಮಧ್ಯದಲ್ಲಿ ಇರುತ್ತಾನೆ. ಮುಖ್ಯಪ್ರಾಣದೇವರು ಕೈ ಮುಗಿದುಕೊಂಡು ಮೂಲೇಶನಾಮಕ ಭಗವಂತನ ಪಾದಗಳನ್ನು ಆಶ್ರಯಿಸಿ ಇರುತ್ತಾರೆ. ಮುಖ್ಯಪ್ರಾಣದೇವರು ಜೀವನಿಂದೊಡಗೂಡಿ ಮೂಲೇಶನಾಮಕನಿಗೆ ಅಭಿಮುಖರಾಗಿ ಇರುತ್ತಾರೆ.

ವಿವರಣೆ – ಹೃತ್ಕರ್ಣಿಕಾಮೂಲಗತಃ ಸೋಽಂಗುಷ್ಠಾಗ್ರ ಪ್ರಮಾಣಕಃ ।
ಮೂಲೇಶ ಇತಿ ನಾಮಾಽಸ್ಮಿನ್ ಸರ್ವೇ ಜೀವಾಃ ಪ್ರತಿಷ್ಠಿತಾಃ ॥

ಬೃಹದಾರಣ್ಯಕ ಭಾಷ್ಯ॥

ಶ್ರೀಹರಿಕಥಾಮೃತಸಾರದಲ್ಲಿ ಹೀಗೆ ತಿಳಿಸಿದ್ದಾರೆ–

ಮಧ್ಯನಾಡಿಯ ಮಧ್ಯದಲ್ಲಿ ಹೃ
ತ್ಪದ್ಮ ಮೂಲದಿ ಮೂಲಪತಿ ಪದ
ಪದ್ಮಮೂಲದಲಿಪ್ಪ ಪವನನ ಪಾದಮೂಲದಲಿ ॥
ಪೊಂದಿಕೊಂಡಿಹ ಜೀವ ಲಿಂಗಾನಿರುದ್ಧ ದೇಹವಿಶಿಷ್ಟನಾಗಿ ॥ (9–19)

**ಜೀವೋಽಪ್ಯಂಜಲಿಮಾಬಧ್ಯ ಸದಾ ಪ್ರಾಣವಶೇ ಸ್ಥಿತಃ ॥86॥**

**ಅನುಗ್ರಹಾಯ ಜೀವೇ ತು ಮುಖ್ಯಪ್ರಾಣೋ ಹರಿಂ ಸದಾ ।**
**ಮಂತತ್ರಯಾತ್ಮಕಂ ಹಂಸಮಂತ್ರಂ ಜಪತಿ ಸರ್ವದಾ ॥87॥**

**ಏಕವಿಂಶತ್ ಸಹಸ್ರಾತ್ಮಾ ಸಷಟ್ ಶತಮಹರ್ನಿಶಂ ।**
**ಜೀವೇನ ಕಾರಯತ್ಯದ್ಧಾ ಹಂಸಮಂತ್ರಂ ಜಪನ್ ಸದಾ ॥88॥**

ಜೀವನು ಕೂಡ ಅಂಜಲಿಬದ್ಧನಾಗಿ (ಕೈಮುಗಿದುಕೊಂಡು) ಯಾವಾಗಲೂ ಮುಖ್ಯಪ್ರಾಣದೇವರ ವಶದಲ್ಲಿ ಇರುತ್ತಾನೆ. ಜೀವನ ಮೇಲೆ ಅನುಗ್ರಹ-ಮಾಡುವುದಕ್ಕಾಗಿ ಮುಖ್ಯಪ್ರಾಣದೇವರು ''ಹಂಸಃ ಸೋಽಹಂ ಸ್ವಾಹಾ'' ಎಂಬ ಹಂಸಮಂತ್ರವನ್ನು ಯಾವಾಗಲೂ ಜಪ ಮಾಡುತ್ತಾ ಇರುತ್ತಾರೆ. ಪ್ರತಿದಿನದಲ್ಲಿ 21600 ಹಂಸಮಂತ್ರ ಜಪವನ್ನು ತಾವು ಮಾಡಿ ಜೀವನಿಂದ ಮಾಡಿಸುತ್ತಾರೆ.

ವಿವರಣೆ- ಹಂಸಃ, ಸೋಽಹಂ, ಸ್ವಾಹಾ ಈ ಮೂರು ಮಂತ್ರಗಳು ಸೇರಿ ''ಹಂಸಃ ಸೋಽಹಂ ಸ್ವಾಹಾ'' ಎಂಬ ಹಂಸ ಮಂತ್ರವಾಗಿದೆ, ಅಂದರೆ ಮಂತ್ರತ್ರಯಾತ್ಮಕವಾದ ಮಾಲಾಮಂತ್ರವಾಗಿದೆ. ಇದನ್ನು ಶ್ರೀಮಧ್ವಾಚಾರ್ಯರು ತಂತ್ರಸಾರ ಸಂಗ್ರಹದಲ್ಲಿ ಹೀಗೆ ತಿಳಿಸಿದ್ದಾರೆ.

ವಿಯತ್ಸ ಇತಿ ಯುಗ್ಮಾರ್ಣೋಽ ವಿಪರೀತಶ್ಚ ಸ ಸ್ಮೃತಃ ।
ಸ ಸರ್ಗ ಹೀನೋ ವೇತಶ್ಚ ಬಿಂದು ಹೀನೋತ್ತರಸ್ತಥಾ ॥
ತ್ರಯ ಏತೇ ಮಹಾಮಂತ್ರಾಃ ಪುರುಷಾರ್ಥಚತುಷ್ಟಯೇ ।
ಕಲ್ಪವೃಕ್ಷಾಃ ಪ್ರಿಯಾ ವಿಷ್ಣೋರ್ವಿಶೇಷಾತ್ ಜ್ಞಾನದಾಯಕಾಃ ॥ (4-20,21)

ಹಂಸಮಂತ್ರ ಸಂಕಲ್ಪ ಪ್ರಕಾರ-

ಮುಖ್ಯಪ್ರಾಣೇನ ಮದ್ದೇಹೇ ಮಂತ್ರತ್ರಯಜಪಃಸದಾ ।
ಅನುಗ್ರಹಾಯ ಮೇ ವಿಷ್ಣುಪ್ರೀತಯೇ ಕ್ರಿಯತೇ ಹಿ ಸಃ ॥

**ಹೃದಯೇ ವಾಸುದೇವೋಽಸ್ತಿ ಪ್ರಾಣವಾಯುಶ್ಚ ತತ್ರಗಃ ।**
**ದೇಹೇ ದಕ್ಷಿಣಹಸ್ತೇ ತು ವರ್ತತೇ ಮಧುಸೂದನಃ ॥89॥**

ಹೃದಯದಲ್ಲಿ ವಾಸುದೇವರೂಪೀ ಭಗವಂತ ಇರುತ್ತಾನೆ. ಅಲ್ಲಿಯೇ ಪ್ರಾಣವಾಯು ಕೂಡ ಇರುತ್ತಾನೆ. ದೇಹದ ಬಲಕೈಯಲ್ಲಿ ಮಧುಸೂದನರೂಪೀ ಭಗವಂತ ಇರುತ್ತಾನೆ.

**ತದ್ಧಸ್ತಸಂಧಿಗಾಸ್ತತ್ರ ಕಪಿಲಾದ್ಯಾಃ ಪ್ರಕೀರ್ತಿತಾಃ ।**

**ಶ್ರೀಧರೋ ವಾಮಹಸ್ತಸ್ಥಃ ಚಾರ್ವಂಗಾದ್ಯಾಶ್ಚ ಸಂಧಿಗಾಃ ॥90॥**

**ಪಂಚರೂಪಾ ಹರೇಃ** ★

ಬಲಕೈಯ ಐದು ಸಂಧಿಸ್ಥಾನಗಳಲ್ಲಿ ಕಪಿಲಾದಿಯಾಗಿ ಜಸಾರ ಪರ್ಯಂತವಾಗಿ ಐದು ವರ್ಣವಾಚ್ಯರೂಪಗಳಿಂದ ಭಗವಂತ ಇರುತ್ತಾನೆ. ಎಡಗೈಯಲ್ಲಿ ಶ್ರೀಧರ ರೂಪೀ ಭಗವಂತ ಇರುತ್ತಾನೆ. ಹಾಗೆಯೇ ಎಡಕೈಯ ಐದು ಸಂಧಿಗಳಲ್ಲಿ(ಕೀಲುಗಳಲ್ಲಿ) ಚಾರ್ವಾಂಗ ಮೊದಲಾದ ರೂಪಗಳಿವೆ.

ವಿವರಣೆ- ಕಪಿಲಾದಿ ಐದುರೂಪಗಳು- ಕಪಿಲ, ಖಪತಿ, ಗರುಡಾಸನ, ಘರ್ಮ, ಜಸಾರ ಮತ್ತು ಚಾರ್ವಾಂಗ, ಛಂದೋಗಮ್ಯ, ಜನಾರ್ದನ, ಝೂಟಿತಾರಿ ಇಮ ಇವು ಎಡಕೈ ಸಂಧಿಯಲ್ಲಿರುವುವು.

★ **ಪಾಣಿತಲೇ ದಕ್ಷಃ ಪ್ರಕೀರ್ತಿತಃ ।**

**ವಾಮಪಾರ್ಶ್ವೇ ವಾಮನಶ್ಚ ಪೃಷ್ಠೇ ಚೇಶಾನ ಸಂಜ್ಞಿಕಃ ॥91॥**

ಬಲಹಸ್ತತಲ (ಅಂಗೈ)ದಲ್ಲಿ ದಕ್ಷಪ್ರಜಾಪತಿ ಇದ್ದಾನೆ. ಎಡಅಂಗೈಯಲ್ಲಿ ವಾಮನ-ರೂಪಿಯು, ಹಿಂಭಾಗದಲ್ಲಿ ಈಶಾನ ಹೆಸರಿನ ಭಗವಂತನ ರೂಪವೂ ಇರುತ್ತದೆ.

**ನಾಭೌ ಸಮಾನವಾಯುಶ್ಚ ಗುದೇಽಪಾನಃ ಪ್ರಕೀರ್ತಿತಃ ।**

**ಪಾಯ್ವಿಂದ್ರಿಯೇ ಮಿತ್ರನಾಮಾ ಗುಹ್ಯೇ ಸ್ವಾಯಂಭುವೋ ಮನುಃ ॥92॥**

ನಾಭಿಯಲ್ಲಿ ಸಮಾನವಾಯುವು, ಗುದಪ್ರದೇಶದಲ್ಲಿ ಅಪಾನವಾಯುವು ಇರುತ್ತಾರೆ. ಪಾಯು ಇಂದ್ರಿಯದಲ್ಲಿ ಮಿತ್ರನಾಮಕ ಸೂರ್ಯದೇವರು ಗುಹ್ಯೇಂದ್ರಿಯದಲ್ಲಿ ಸ್ವಾಯಂಭುವ ಮನುವು ಇರುತ್ತಾರೆ.

**ಕಟ್ಯಾಮಾಸ್ತೇ ಅನಿರುದ್ಧಶ್ಚ ಶೇಷೋ ರುದ್ರಃ ಖಗೇಶ್ವರಃ ।**

**ತ್ರಯಸ್ತೇ ದಕ್ಷಪಾದಸ್ಥಾಃ ಟಂಕ್ಯಾದ್ಯಾಃ ಪಂಚಸಂಧಿಗಾಃ ॥93॥**

---

★ ಅನ್ವಯಾನುಸಾರ ಅರ್ಥ ಸುಲಭವಾಗಲು ಶ್ಲೋಕಗಳನ್ನು ವಿಭಜಿಸಲಾಗಿದೆ.

ಕಟಿ (ಟೊಂಕ) ಪ್ರದೇಶದಲ್ಲಿ ಅನಿರುದ್ಧ ರೂಪಿಯು, ಬಲಪಾದದಲ್ಲಿ ಶೇಷ, ರುದ್ರ, ಗರುಡ ಮೂವರು, ಹಾಗೂ ಟಂಕಿಯೇ ಮೊದಲಾದ ಐದು ರೂಪಗಳು ಬಲಗಾಲಿನ ಸಂಧಿಗಳಲ್ಲಿ (ಕೀಲುಗಳಲ್ಲಿ) ಇರುತ್ತವೆ.

ವಿವರಣೆ- ಟಂಕೀ ಎಂದರೆ ಟಂಕವೆಂಬ ಆಯುಧ ಧರಿಸಿರುವವನು. (ಟಂಕ್ಯಾದ್ಯಾ ಎಂದರೆ ಟಂಕೀ, ಠಲಕ, ಡರಕ, ಢರೀ, ಣಾತ್ಮ ಎಂಬ ರೂಪಗಳು)

**ಸ್ಕಂದೇಂದ್ರೌ ವಾಮಪಾದಸ್ಥೌ ತಾರಾದ್ಯಾ ಪಂಚಸಂಧಿಗಾಃ ।**
**ತತ್ರ ಪಾದೇ ಜಯಂತೋಽಸ್ತಿ ಯಜ್ಞಮೂರ್ತಿಶ್ಚ ತತ್ರಗಃ ॥94॥**

ಎಡ ಪಾದದಲ್ಲಿ ಸ್ಕಂದ ಮತ್ತು ಇಂದ್ರರು ಇರುತ್ತಾರೆ. ಎಡಗಾಲಿನ ಐದು ಸಂಧಿಗಳಲ್ಲಿ ತಾರಾದಿ (ತಾರ, ಥಬ, ದಂಡೀ, ಧನ್ವೀ, ನಮ್ಯ) ಐದು ರೂಪಗಳು ಇರುತ್ತವೆ. ಮತ್ತು ಪಾದದಲ್ಲಿ ಜಯಂತನು ಇರುತ್ತಾನೆ. ಹಾಗೂ ಯಜ್ಞಮೂರ್ತಿ ಕೂಡ ಇರುತ್ತಾನೆ.

ವಿವರಣೆ-ಪಾದೇವಿಷ್ಣುಃ ಸಮಾವಿಷ್ಟಃ ಎಂಬ ಭಾಗವತ ತೃತೀಯ-ತಾತ್ಪರ್ಯದ ಮಾತನ್ನು ಇಲ್ಲಿ ಸ್ಮರಿಸಬಹುದು.

**ದಕ್ಷಿಣಾಂಗುಷ್ಠಗೋ ವಾಯುಃ ದೇಹಾಧಾರಸ್ವರೂಪಕಃ ।**
**ತತ್ರ ನಾರಾಯಣೋಽಪ್ಯಸ್ತಿ ನವಕೋಟ್ಯಶ್ಚ ದೇವತಾಃ ॥95॥**

ಬಲದಕಾಲಿನ ಅಂಗುಷ್ಠದಲ್ಲಿರುವ ವಾಯುವು ದೇಹಕ್ಕೆ ಆಧಾರಸ್ವರೂಪ-ನಾಗಿದ್ದಾನೆ. ಅಲ್ಲಿ ನಾರಾಯಣನೂ, ಒಂಬತ್ತು ಕೋಟಿ ದೇವತೆಗಳೂ ಇರುತ್ತಾರೆ.

ವಿವರಣೆ- ಈ ನಾರಾಯಣ ರೂಪಕ್ಕೆ ಭಾರಭೃತ್ ಎಂದು ಹೆಸರಿದೆ.

**ತತ್ವಾಭಿಮಾನಿನಃ ಸರ್ವೇ ಶರೀರೇಽಸ್ಮಿನ್ ವಿಶೇಷತಃ ।**
**ಸಂತಿ ಕರ್ಮಾಣಿ ಅನಂತಾನಿ ಹ್ಯನಂತಾನಿ ತತಸ್ತತಃ ॥96॥**

**ಅನಂತಾನಂತ ರೂಪೇಣ ವರ್ತತೇ ಜಗದೀಶ್ವರಃ ॥**

ಈ ಮಾನವ ದೇಹದಲ್ಲಿ ಎಲ್ಲ ತತ್ವಾಭಿಮಾನಿ ದೇವತೆಗಳು ಇರುತ್ತಾರೆ. ಕರ್ಮಗಳು ಅನಂತವಾಗಿವೆ. ಅನಂತರೂಪಗಳಿಂದ ಜಗತ್ತಿಗೆ ಸ್ವಾಮಿಯಾದ ಭಗವಂತನು ಅಲ್ಲಿ ಇರುತ್ತಾನೆ.

**ಜಾನತಾಮೀದೃಶಂ ಗಾತ್ರಂ ತತ್ರಸ್ಥೋ ಭಗವಾನ್ ಹರಿಃ ।**
**ದದಾತಿ ದುರ್ಲಭಾಂ ಮುಕ್ತಿಂ ಭುಕ್ತಿಮತ್ರ ತನೋತ್ಯಸೌ ॥97॥**

ಈ ರೀತಿಯಾಗಿ ಮಾನವ ದೇಹವನ್ನು ಹಾಗೂ ಅಲ್ಲಿರತಕ್ಕ ಭಗವಾನ್ ಶ್ರೀಹರಿಯನ್ನು ಯಾರು ತಿಳಿಯುವರೋ ಅವರಿಗೆ ದುರ್ಲಭವಾದ ಮುಕ್ತಿಯನ್ನು ಇಲ್ಲಿ ಭೋಗಗಳನ್ನು ಕೊಡುತ್ತಾನೆ.

**ಇತಿ ಶ್ರೀ ರಾಮಾಚಾರ್ಯ ವಿರಚಿತಾ ಅಧ್ಯಾತ್ಮ ಮಾಲಿಕಾ ಸಮಾಪ್ತಾ**
**ಇಲ್ಲಿಗೆ ಅಧ್ಯಾತ್ಮಮಾಲಿಕಾದ ಕನ್ನಡಾನುವಾದವು ಸಮಾಪ್ತವಾಯಿತು**

**॥ ಶ್ರೀಮಧ್ವೇಶಾರ್ಪಣಮಸ್ತು ॥**

# ಇದೇ ಲೇಖಕರ ಪ್ರಕಟಿತ ಕೃತಿಗಳು

| | | |
|---|---|---|
| 1. | ಶ್ರೀಮಜ್ಜಯತೀರ್ಥ ಸುಪ್ರಭಾತ | 00-60 |
| 2. | ಶ್ರೀ ಸಪ್ತರ್ಷಿರಾಮಾಯಣ ಹಾಗೂ ಶ್ರೀ ರಾಮ ವೇದಪಾದ ಸ್ತೋತ್ರ (ತೃತೀಯ ಮುದ್ರಣ) | 5-00 |
| 3. | ದಾಸ ಸಾಹಿತ್ಯ ಸೌರಭ (ಸಂಪುಟ-1) | 18-00 |
| 4. | ಉಪನೀತರಿಗೆ ಉಪಯುಕ್ತ ಉಪದೇಶ | 20-00 |
| 5. | ಶ್ರೀ ಸಂಧ್ಯಾಸಾರ ಸಂಗ್ರಹ (ದ್ವಿತೀಯ ಮುದ್ರಣ) | 20-00 |
| 6. | ಶ್ರೀರುಕ್ಮಿಣೀಶವಿಜಯ ಸಾರಸಂಗ್ರಹ (ಸೈದ್ಧಾಂತಿಕ ಅಧ್ಯಯನ) | 20-00 |
| 7. | ಶ್ರೀ ದೇವಪೂಜಾ ಸಾರಸಂಗ್ರಹ (ಚತುರ್ಥ ಮುದ್ರಣ) | 20-00 |
| 8. | ಸದಾಚಾರ ಸೌರಭ (ಶ್ರೀ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ, ಉಜಿರೆ ಅವರಿಂದ ಪ್ರಕಟಿತ) | 25-00 |
| 9. | ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರಮ್ (ಪಂಚಮ ಮುದ್ರಣ) (ಶ್ರೀ ಶ್ರೀ ಸತ್ಯಸಂಧತೀರ್ಥರ ಭಾಷ್ಯಾನುಸಾರಿ ಕನ್ನಡ ಅನುವಾದ) | 25-00 |
| 10. | ಶ್ರೀ ವೈಶ್ವದೇವಸಾರಸಂಗ್ರಹ (ದ್ವಿತೀಯ ಮುದ್ರಣ) | 20-00 |
| 11. | ದಾಸ ಸಾಹಿತ್ಯ ಸೌರಭ (ಸಂಪುಟ-2) | 20-00 |
| 12. | ಶ್ರೀಕೃಷ್ಣಾವತಾರ ಸಂದೇಶ | 25-00 |
| 13. | ಶ್ರೀ ಅಣುಭಾಷ್ಯ ಸಾರಸಂಗ್ರಹ (ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರ ಟಿಪ್ಪಣಿ - ಕನ್ನಡಾನುವಾದ ಸಹಿತ) | 25-00 |
| 14. | ವೇದ ಬ್ರಹ್ಮಸೂತ್ರಗಳು ಇತ್ಯಾದಿ (ಆನಂದತೀರ್ಥ ಪ್ರತಿಷ್ಠಾನ ಪೂರ್ಣಪ್ರಜ್ಞ ವಿದ್ಯಾಪೀಠ ಬೆಂಗಳೂರು ಇವರಿಂದ ಪ್ರಕಟಿತ) | 50-00 |
| 15. | ಗಜೇಂದ್ರಮೋಕ್ಷ (ಒಂದು ಅಧ್ಯಯನ) | 30-00 |
| 16. | ದಶಾವತಾರ ಸ್ತೋತ್ರಮಂಜರೀ (ಎಸ್.ಎಮ್.ಎಸ್.ಓ. ಸಭಾ ಪ್ರಕಟಿತ) | 30-00 |
| 17. | ಮಧ್ವಾಷ್ಟಕಮ್ (ವಿವರಣೆ ಸಹಿತ) | 10-00 |
| 18. | ಗೀತೆಯ ಅಂತರಂಗ | 20-00 |
| 19. | ಧಾತ್ರೀಮಹಿಮೆ, ಧಾತ್ರೀಹೋಮ ಹಾಗೂ ವನಭೋಜನ ಮಹಾತ್ಮೆ | 10-00 |
| 20. | ತೀರ್ಥಪ್ರಬಂಧ : ಒಂದು ಅಧ್ಯಯನ | 20-00 |
| 21. | ಶ್ರೀನರಸಿಂಹಸ್ತೋತ್ರಮಂಜರೀ(ಅಪೂರ್ವ ಸ್ತೋತ್ರಸಂಗ್ರಹ) (2ನೆ ಆವೃತ್ತಿ) | 30-00 |
| 22. | ಪ್ರಾತಃ ಸ್ತೋತ್ರಗಳು (ಕನ್ನಡ ಭಾವಾನುವಾದ ಸಹಿತ) | 15-00 |
| 23. | ಸಮುದ್ರ ಮಥನ - ಒಂದು ಅಧ್ಯಯನ | 30-00 |
| 24. | ಶ್ರೀ ರುಕ್ಮಿಣೀಶ ವಿಜಯಃ (ಕನ್ನಡ ಕಥಾರೂಪ) | 15-00 |
| 25. | ಶ್ರೀವೇದವ್ಯಾಸ ಸ್ತೋತ್ರಮಂಜರೀ (ಹರಿದಾಸರ ಕೃತಿಗಳ ಸಹಿತ) | 20-00 |
| 26. | ಶ್ರೀನವಗ್ರಹ ಸ್ತೋತ್ರ ಮಂಜರೀ | 15-00 |
| 27. | The glory of great saint Sri Vadirajteerth | 15-00 |
| 28. | ಶ್ರೀಕೃಷ್ಣಸ್ತೋತ್ರಮಂಜರಿ (ಅಪೂರ್ವ ಸ್ತೋತ್ರ ಸಂಗ್ರಹ) | 30-00 |
| 29. | ಶ್ರೀವಾದಿರಾಜಪೂಜ್ಯಚರಣ ವಿರಚಿತ ಶ್ರೀಮದ್‌ಭಾಗವತಾನುಕ್ರಮಣಿಕಾ ಕನ್ನಡಾನುವಾದ | 20-00 |
| 30. | ಕಾವ್ಯಶಾಸ್ತ್ರವಿನೋದ (ಎಸ್.ಎಮ್.ಎಸ್.ಓ. ಸಭಾ ಪ್ರಕಟಿತ) | 20-00 |
| 31. | ವಿವಾಹಿತರಿಗೆ ವಿಹಿತ ಉಪದೇಶ | 30-00 |
| 32. | ವೈದ್ಯಮೂರ್ತಿ ಶ್ರೀ ಧನ್ವಂತರಿ | 15-00 |
| 33. | ಶ್ರೀ ಋಷಿಪಂಚಮಿ ವ್ರತ, ಶ್ರೀ ವಿಷ್ಣುಪಂಚಕ ವ್ರತ, ಶ್ರೀ ಭೀಷ್ಮಪಂಚಕ ವ್ರತ | 20-00 |
| 34. | ಶ್ರೀ ಅಧ್ಯಾತ್ಮಮಾಲಿಕಾ | 10-00 |